ಪ್ರತಿಭಾ ಗ್ರಂಥಮಾಲೆ, ಧಾರವಾಡ. ೧೦ನೇ ವರುಷದ ೬ನೇ ಕಿರಣ

# ಚೋರ ಶಿಖಾಮಣಿ

ಪತ್ತೇದಾರಿ ಕಾದಂಬರಿ

'ರಮೇಶ'

ಮುದ್ರಕರು ಮತ್ತು ಪ್ರಕಾಶಕರು
ಭಾಲಚಂದ್ರ ವೆಂಕಟೇಶ ಘಾಣೇಕರ
ಪ್ರತಿಭಾ ಮುದ್ರಣ, ಧಾರವಾಡ

ಜೂನ್ ೧೯೫೩ ಬೆಲೆ, ರೂ: ೧-೪-೦

# ಅರಿಕೆ.

ಪ್ರತಿಭಾ ಗ್ರಂಥಮಾಲೆಯ ಹತ್ತನೆ ವರುಷದ ಕೊನೆಯ ಕಿರಣವಾದ ಈ ಮನೋಹರ ಪತ್ತೇದಾರಿ ಕಾದಂಬರಿಯನ್ನು ಇಷ್ಟು ಬೇಗನೆ ಪ್ರಕಟಿಸಿದ್ದನ್ನು ಕಂಡು ಚಂದಾದಾರರಿಗೆ ಸೋಜಿಗವಾಗಬಹುದು. ಆದರೆ ಮಾಲೆಯ ವರ್ಷಾರಂಭವನ್ನು ಜನೆವರಿಗೆ ಬದಲು ಆಗಸ್ಟದಿಂದಲೇ ಆರಂಭಿಸುವ ಹೊಸ ವಿಚಾರವನ್ನು ಮಾಡಿದ್ದರಿಂದ ಈ ರೀತಿ ಬೇಗನೆ ಈ ಕೊನೆಯ ಪುಸ್ತಕವನ್ನು ಸಲ್ಲಿಸಿದ್ದೇವೆ. ಹೊಸ ವರುಷದ-ಅಂದರೆ ಹನ್ನೊಂದನೆಯ ವರುಷದ ಆರಂಭದ ಕಿರಣಗಳನ್ನು ೧೯೫೩ನೇ ಆಗಸ್ಟ ಮೊದಲನೆ ವಾರದಲ್ಲಿಯೇ ಪ್ರಕಟಿಸಿ ವ್ಹಿ. ಪಿ. ಕಳಿಸುತ್ತೇವೆ.

ಈಗೀಗ ಅಂಚೇವೆಚ್ಚವು ವಿಪರೀತ ಹೆಚ್ಚಾಗಿದ್ದುದರಿಂದ ಹೊಸ ವರುಷದಿಂದ ಚಂದಾ ಹಣವನ್ನು ೧ ರೂ. ಹೆಚ್ಚಿಸದೆ ಗತ್ಯಂತರವಿಲ್ಲದಾಗಿದೆ. ಅಂದರೆ ಇನ್ನು ಮೇಲೆ ಮಾಲೆಯ ಚಂದಾ ಹಣ ಏಳು ರೂಪಾಯಿ. ಇದನ್ನು ಚಂದಾದಾರರು ಒಪ್ಪಿಕೊಳ್ಳುವರೆಂದು ನಂಬಿದ್ದೇವೆ.

ಈ ವರುಷದಂತೆಯೇ ಮುಂದಿನ ವರುಷವಾದರೂ ಒಳ್ಳೊಳ್ಳೇ ಕಾದಂಬರಿಗಳನ್ನು ಪ್ರಕಟಿಸತಕ್ಕವರಿದ್ದೇವೆ. ಎಂದಿನಂತೆ ಚಂದಾದಾರರು ಪ್ರೋತ್ಸಾಹನೆಯನ್ನು ಕೊಡಬೇಕಾಗಿ ಬಿನ್ನವಿಸಿಕೊಳ್ಳುತ್ತೇವೆ.

ಮುಂದಿನ ವರುಷದಲ್ಲಿ ಶ್ರೀ. ಅ. ನ.ರವರ **"ಸಂಗ್ರಾಮ"** ಶ್ರೀ. ಪುರಾಣಿಕರ **"ಹಬ್ಬಿದ ಬಳ್ಳಿ"** ಮತ್ತು ಶ್ರೀ. ಕಟ್ಟೀಮನಿಯವರ ಹೊಸದೊಂದು ಕಾದಂಬರಿ ಬರಲಿವೆ.

ಈ ವರುಷ ನಮ್ಮ ಮಾಲೆಗೆ ನೆರವಾದ ಎಲ್ಲ ಮಹನೀಯರಿಗೂ ವಂದನೆಗಳು. ಇದೇ ರೀತಿ ಮಾಲೆಯ ಬಗ್ಗೆ ಎಲ್ಲರ ಅಭಿಮಾನ ಹೆಚ್ಚುತ್ತಿರಲೆಂದು ಹಾರೈಸುತ್ತೇವೆ.

ಧಾರವಾಡ ತಾ. ೧-೬-೧೯೫೩ —ಪ್ರಕಾಶಕ

# ಚೋರಶಿಖಾಮಣಿ

೧

ಶ್ರೀ. ರಾಬರ್ಟ್ ಬ್ಲೇಕ್ ತುಂಬಾ ಕೆಲಸದ ಗಡಿಬಿಡಿಯಲ್ಲಿದ್ದಾಗ ಟೆಲಿಫೋನಿನ ಗಂಟೆ ಬಾರಿಸಿತು ಅವರು ಬೇಸರದಿಂದ ಮೋರೆ ಕಿವುಚಿ ರಿಸೀವರನ್ನು ಕೈಲಿ ತೆಗೆದುಕೊಂಡು ಮಾತನಾಡಿದರು: "ಯಾರು ಬ್ಲೇಕರನ್ನು ಕರೆದವರು? ನಾನೇ ಬ್ಲೇಕ್."

"ನಾನು ಇನ್ಸ್‌ಪೆಕ್ಟರ್ ಪ್ರಿಟ್ಟಿ; ಪೈನ್‌ಸ್ಟ್ರೀಟ್ ಠಾಣ್ಯದಿಂದ ಮಾತನಾಡುತ್ತಿದ್ದೇನೆ." ಗಂಭೀರ ಸ್ವರದಲ್ಲಿ ಉತ್ತರ ಬಂದಿತು.

ಬ್ಲೇಕರ ಬೇಸರ ಹಿಮ್ಮೆಟ್ಟಿತು. "ಏಕೆ, ಏನು ಸಮಾಚಾರ ಇನ್ಸ್‌ಪೆಕ್ಟರ್?"

"ನಿಮಗೆ ತೊಂದರೆ ಕೊಡುವ ಇಚ್ಛೆ ನನಗಿರಲಿಲ್ಲ ಮಿ. ಬ್ಲೇಕ್. ನಿಮ್ಮ ಸಮಯ ಬಹಳ ಬೆಲೆಯುಳ್ಳದ್ದೆಂದು ಬಲ್ಲೆ. ಆದರೆ ಮಾಡಲೇನು ಹೇಳಿ; ನಮ್ಮ ಪಿ. ಸಿ. ಕುಡಿದು ಧಾಂದಲೆ ಮಾಡುತ್ತಿದ್ದಳೆಂದು ಒಬ್ಬ ತರುಣಿಯನ್ನು ಹಿಡಿದು ತಂದಿದ್ದಾನೆ. ಆಕೆ-ನಮ್ಮ ಮೇಲೆ ಎಚ್ಚರವಿಲ್ಲದ್ದಕ್ಕೋ ಏನೋ ತಿಳಿಯದು-ಹೇಳುತ್ತಾಳೆ; ನೀವೇನೋ ಅವಳಿಗೆ ಮಿತ್ರರಂತೆ, ಹಿತೈಷಿ ಋಣಾನುಬಂಧಿಗಳಂತೆ. ಆಕೆಯ ಇಷ್ಟದ ಮೇರೆಗೇ ನೀವು ಅವಳಿಗೆ ಹೊಣೆಯಾಗಿ ಬಿಡುಗಡೆ ಮಾಡಬೇಕೆಂದು ಈ ಅಕಾಲದಲ್ಲಿ ನಿಮ್ಮನ್ನು ಕರೆಯಬೇಕಾಯಿತು. ಈ ಸುದ್ದಿ ತಿಳಿದೊಡನೆ ನೀವು ಬಂದು ಅವಳಿಗೆ ಹೊಣೆಯಾಗುವಿರೆಂದು ಅವಳ ನಂಬಿಕೆ."

ವಿಸ್ಮಯದಿಂದ ಬ್ಲೇಕರ ಹುಬ್ಬು ಗಂಟಿಕ್ಕಿದವು. "ಅವಳ ಹೆಸರೇನು?" ಎಂದು ಕೇಳಿದರು.

"ಇಲಿನ್ ಸ್ಮಿಥ್ ಎಂದು ಹೇಳುತ್ತಾಳೆ. ನನಗೆ ಮಾತ್ರ ಅದರಲ್ಲಿ ವಿಶ್ವಾಸವಿಲ್ಲ. ಇಲಿನ್ ಎಂದು ಹೇಳಿದರೆ ಸಾಕು, ನೀವವಳನ್ನು ಗುರುತಿಸುವಿರೆಂದು ಆಕೆ ಅಂದಳು."

"ಇಲಿನ್ ಸ್ಮಿಥ್? ಇಲಿನ್ ಎಂಬ ಹೆಸರೇನೋ ಗುರುತಿನದೆಂದು

ಜ್ಞಾಪಕವಾಗುತ್ತವೆ; ಆದರೆ :ಸ್ಮಿತ್ ಎಂಬ ಉಪಾಧಿ ಮಾತ್ರ ಸಂಪೂರ್ಣ ಅಪರಿಚಿತ. ಆಕೆಹೇಗೆ ಇದ್ದಾಳೆ ಕೊಂಚ ಹೇಳಿ.''

''ಬಣ್ಣ ಕೊಂಚ ಕೆಂಪು ಜಾಸ್ತಿ. ಆದರೂ ಸುಂದರಿಯೇ; ನಿಲವು ಎತ್ತರ. ನಮ್ಮ ಠಾಣ್ಯದಲ್ಲಿ ಅವಳ ಗುರುತು ಯಾರಿಗೂ ಇಲ್ಲ. ನಮ್ಮಲ್ಲಿಯ ತುಬ್ಬುಗಾರರೆಲ್ಲ ಈಗ ಹೊರಗೆ ಹೋಗಿದ್ದಾರೆ. ಅವರಿದ್ದಿದ್ದರೆ ಒಬ್ಬನಿಲ್ಲೊಬ್ಬ ಈಕೆಯನ್ನು ಗುರುತಿಸಬಹುದಿತ್ತು.''

ಇಲಿನ್ ಸ್ಮಿಥ್. ಆಕೆ ಯಾರೆಂಬುದು ಬ್ಲೇಕರಿಗೆ ಗೊತ್ತಾಗಲಿಲ್ಲ. ಆದರೂ ಅವರು ಕುತೂಹಲವಶದಿಂದ ಯೋಚನೆ ಮಾಡುತ್ತ ಮನೆಯಿಂದ ಹೊರಬಿದ್ದರು. ಅವರ ಮನೆಯಿಂದ ವೈನ್‌ಸ್ಟ್ರೀಟ್ ಠಾಣ್ಯ ಹೆಚ್ಚು ದೂರವಿರ ಲಿಲ್ಲ. ಕೆಲಹೊತ್ತಿನಲ್ಲಿಯೇ ಅವರು ಅಲ್ಲಿಗೆ ತಲುಪಿ ಚಾರ್ಜ್ ರೂಮಿನಲ್ಲಿ ಆ ಯುವತಿಯನ್ನು ಕಂಡರು.

ತರುಣಿ ಅವರ ಪ್ರತೀಕ್ಷೆಯಲ್ಲಿಯೇ ಬೆಂಚೊಂದರ ಮೇಲೆ ಕುಳಿತಿದ್ದಳು. ದಪ್ಪನಾದ ಕೋಟು ಧರಿಸಿದ್ದಳು; ಅದು ಬಹಳ ಬೆಲೆಯುಳ್ಳದ್ದು. ಎದೆಯ ಭಾಗ ತೆರೆದಿತ್ತು; ಒಳಗಿನ ಹಳದಿ ಬಣ್ಣದ ರೇಶಿಮೆಯ ಫ್ರಾಕಿನ ಕೆಲವಂಶ ಕಾಣುತ್ತಿತ್ತು. ಅದು ಒಂದು ಕಡೆ ಜಗ್ಗಾಡಿ ಹರಿದಂತಿತ್ತು. ಈಕೆ ಯಾರೊ ಡನೆಯೋ ಗುದ್ದಾಡಿರಬೇಕು, ಈ ಗುದ್ದಾಟಕ್ಕಾಗಿಯೇ ಈಕೆಯನ್ನು ಬಂಧಿ ಸಿರಬೇಕು ಎಂದು ಬ್ಲೇಕರು ಅನುಮಾನಿಸಿಕೊಂಡರು.

ಯುವತಿಯ ಅವಸ್ಥೆಯನ್ನು ಕಂಡು ಬ್ಲೇಕರು ಹೆಚ್ಚಾಗಿ ಕುಡಿದದ್ದರಿಂದ ಎಚ್ಚರು ತಪ್ಪಿದೆಯೆಂದು ಅರಿತುಕೊಂಡರು. ಅವಳ ಬಂಗಾರಕಾಂತಿಯ ಕೇಶರಾಶಿ ಹರಡಿ ಹಣೆಯ ಮೇಲೆ ಅಲೆಯುತ್ತಿತ್ತು. ಮದ್ಯದ ಅಮಲಿನಿಂದ ಅವಳ ಮೊಗ ಮುಂದೆ ಬಾಗಿತ್ತು. ಅವಳು ಕುಳಿತಿದ್ದಂತೆಯೇ ಮೆಲ್ಲಗೆ ತೂಗಾ ಡುತ್ತಿದ್ದಳು.

''ಮಿ. ಬ್ಲೇಕ್, ಈಕೆಯೆ ಆ ತರುಣಿ'' ಎಂದರು ಇನ್ಸ್‌ಪೆಕ್ಟರ್ ಡ್ರೆವಿ ಅವರ ಮುಖ ನೋಡುತ್ತ.

ಆಗವಳು ಮೊಗವೆತ್ತಿ ಬ್ಲೇಕರ ಕಡೆ ನೋಡಿದಳು. ಅವಳ ಕಣ್ಣುಗಳ ಲ್ಲಿಯ ಕೆಂಪು ಕುಡಿದ ಮತ್ತು ಇನ್ನೂ ಇಳಿದಿಲ್ಲವೆಂದು ಸೂಚಿಸುತ್ತಿತ್ತು. ಆದರೂ ಅವಳ ಕಣ್ಣುಗಳಲ್ಲಿ ಧೂರ್ತತೆ ಪ್ರತಿಫಲಿತವಾಗಿತ್ತು. ಹಣೆಯ ಮೇಲಿನ

ಕೂದಲನ್ನು ಸರಿಪಡಿಸಿಕೊಂಡು ಅವರ ಕಡೆ ನೋಡಿ ಯುವತಿ ಮೆಲುನಗೆ ನಕ್ಕು ಜಡಿತಸ್ವರದಿಂದ ಮಾತನಾಡಿದಳು: "ನನ್ನ ಬೇಡಿಕೆಯಂತೆ ಇಲ್ಲಿಗೆ ದಯಮಾಡಿಸಿದ್ದಕ್ಕಾಗಿ ತಮಗೆ ಧನ್ಯವಾದ. ತಾವೆಷ್ಟು ಸಭ್ಯಗೃಹಸ್ಥರು ಮಿ. ಬ್ಲೇಕ್!"

ಬ್ಲೇಕರು ಅವಳ ಲಾವಣ್ಯಪೂರ್ಣವಾದ ಮಾಟ ಮೊಗದ ಕಡೆ ನೋಡಿ ವಿಸ್ಮಿತರಾದರು. "ಏನಾಶ್ಚರ್ಯ! ನೀನು! ನೀನು ಇಲ್ಲಿ?"

ಅವರ ಮಾತನ್ನು ಕೇಳಿ ಇನ್ಸ್‌ಪೆಕ್ಟರ್ "ಓ, ಹಾಗಾದರೆ ನಿಮಗೆ ಈಕೆಯ ಗುರುತಿದೆ!" ಎಂದರು.

"ಹಾಂ. ಗುರುತಿಲ್ಲದೇನು?" ಎಂದು ಬ್ಲೇಕರು ಯುವತಿಯನ್ನು ಕುರಿತು, "ಈ ರಾತ್ರಿ ಹೊತ್ತಿನಲ್ಲಿ ನೀನು ನನ್ನನ್ನೇಕೆ ಇಲ್ಲಿಗೆ ಬರಮಾಡಿಕೊಂಡೆ ಮಿಸೆಸ್–"

ಮಾತನ್ನು ಪೂರ್ತಿಗೊಳಿಸಲು ಬಿಡದೆ ಯುವತಿ ವ್ಯಗ್ರಭಾವದಿಂದ ಕೈಯೆತ್ತಿ, "ಚುಪ್ ಹೆಸರು ಒಡೆಯಬೇಡಿರಿ. ನನಗೆ ಗೊತ್ತು, ತಾವು ಸಭ್ಯ ಗೃಹಸ್ಥರು. ಎರಡನೆಯವರ ಸಹಾಯ ಸಿಕ್ಕಿದ್ದರೆ ನಿಮಗೆ ತೊಂದರೆ ಕೊಡುತ್ತಿದ್ದಿಲ್ಲ ನಾನು." ಎಂದು ನುಡಿದಳು.

"ನಿನ್ನ ಪತಿರತ್ನ ಎಲ್ಲಿ?" ಎಂದು ಪ್ರಶ್ನಿಸಿದರು ಬ್ಲೇಕ್.

"ಮೋಟರಿನಲ್ಲಿ ಊರೊಳಗೆ ಹೋಗಿದ್ದಾನೆ ಅವರು."

ಬ್ಲೇಕರು ಯೋಚಿಸುತ್ತ ಗಲ್ಲ ತಿಕ್ಕಿಕೊಳ್ಳತೊಡಗಿದರು. ಯುವತಿ ಇಲಿನ್ ಸ್ಮಿಥ್ ಎಂದು ಹೆಸರು ಹೇಳಿಕೊಂಡಿದ್ದರೂ ಅವಳ ನಿಜವಾದ ಹೆಸರು ಇಲಿನ್ ಹೆಲ್ ಎಂದು ಬ್ಲೇಕ ಬಲ್ಲರು. ಅವಳಂತಹ ದುಃಸಾಹಸಿ ಚತುರ ಭಾಗ್ಯಾನ್ವೇಷಿಣೀ ಮಹಿಳೆ ಲಂಡನಿನಲ್ಲಿಯೇ ಅಪರೂಪ. ಅವಳ ಗಂಡ ಜಿಲ್ಬರ್ಟ್ ಹೆಲ್ ಶಾಲೆಯಿಂದೋಡಿಬಂದು ಕಳ್ಳರ ಕೂಟವನ್ನು ಸೇರಿದ್ದ. ಅವನು ತಸ್ಕರ ಚೂಡಾಮಣಿಯೀಗ. ಅವರ ಹಾವಳಿಗೆ ಎಲ್ಲೆಯೇ ಇರಲಿಲ್ಲ. ಆದರೆ ಅವರೆಂದೂ ಪೋಲಿಸರ ಕೈಗೆ ಸಿಕ್ಕಿರಲಿಲ್ಲ. ಪೋಲಿಸರ ಕಣ್ಣಲ್ಲಿ ಮಣ್ಣೆರಚಿ ಅವರು ಚೋರವೃತ್ತಿಯಿಂದ ಬದುಕು ಸಾಗಿಸುತ್ತಿದ್ದರೂ ಬ್ಲೇಕರನ್ನು ವಂಚಿಸುವುದು ಅವರಿಂದಾಗಿರಲಿಲ್ಲ. ಆದರೆ ಅವರು ಅವರ ಆನಿಷ್ಟಕ್ಕಾಗಿ ಎಂದೂ ಪ್ರಯತ್ನಿಸಿರಲಿಲ್ಲ. ಏಕೆಂದರೆ, ಇನ್ನೂ ಐದು ಜನ ಕಳ್ಳರನ್ನು ಶೋಧಿ

ಸುವುದಕ್ಕಾಗಿ ಇಂತಹ ಒಬ್ಬಿಬ್ಬರು ಧೂರ್ತ ಕಳ್ಳರನ್ನು—ಹೆಂಗುಸಾಗಲಿ, ಗಂಡುಸಾಗಲಿ—ವಶದಲ್ಲಿಟ್ಟುಕೊಳ್ಳಬೇಕಾಗಿತ್ತು.

"ನೀನೇನು ಮಾಡಿದ್ದೆ?" ಬ್ಲೇಕ್ ಇಲಿನಳನ್ನು ಕೇಳಿದರು.

ಇನ್ಸ್‌ಪೆಕ್ಟರರ ನೋರೆಗೆ ಮುನಿಸಿನ ನೋಟವನ್ನೆಸೆದು ತರುಣಿ ಹೇಳಿದಳು: "ನಾನೇ? ಏನೂ ಮಾಡಿಲ್ಲ. ಒಬ್ಬ ಹೆಂಗಸು ಇನ್ನೊಬ್ಬ ಹೆಂಗುಸಿನೊಡನೆ ಮಾತನಾಡುತ್ತಾ ಇದ್ದರೆ ಈ ಅಸಭ್ಯ ಪೋಲೀಸಿನವರು ಅವರಲ್ಲೊಬ್ಬಳ ಉಡಿಗೆ ತೊಡಿಗೆ ಹಿಡಿದೆಳೆದು ತಮ್ಮ ಕರ್ತವ್ಯನಿಷ್ಠೆಯನ್ನು ಪ್ರದರ್ಶಿಸಬೇಕೆ?"

ಅವಳ ಮಾತನ್ನು ಕೇಳಿ ಇನ್ಸ್‌ಪೆಕ್ಟರ್ ಡ್ರೆವಿ ಪ್ರಸಂಗವನ್ನು ವಿವರಿಸಿದರು. "ಇಲ್ಲಿ ಕೇಳಿ: ಮುರಾಟಿಯ ನೃತ್ಯಮಂದಿರದಲ್ಲಿ ಈಕೆ ಇನ್ನೊಬ್ಬ ಯುವತಿಯೊಡನೆ ಹೊಡೆದಾಡುತಿದ್ದಳೆಂದೂ ಜಗಳವನ್ನು ಬಿಡಿಸಲು ಹೋದ ವ್ಯವಸ್ಥಾಪಕನ ಮೇಲೆ ಇವಳು ಏರಿಹೋಗಿ ಅವನ ಮುಖ ಹರಿದುಕೊಳ್ಳಲು ಯತ್ನಿಸಿದಳೆಂದೂ ಆಗವನು ನಿರುಪಾಯನಾಗಿ ಇವಳನ್ನು ಪೋಲಿಸರಿಗೊಪ್ಪಿಸಿದನೆಂದೂ ನಾನು ಕೇಳಿದ್ದೇನೆ. ಈಕೆ ಪೋಲಿಸರೊಡನೆ ಬರಲೊಪ್ಪದ್ದರಿಂದ ಅವನು ಎಳೆದು ತರಬೇಕಾಯಿತು. ಆ ಎಳೆದಾಟದಲ್ಲಿಯೇ ಇವಳ ಫ್ರಾಕು ಹರಿದಿರಬೇಕು. ಇನ್ನೊಬ್ಬ ಹೆಂಗಸು ಶಾಂತವಾಗಿ ಹಿಂದೆ ಸರಿದು ಹೋದಳಂತೆ."

"ತಿಳಿಯಿತು" ಎಂದು ಗಂಭೀರವಾಗಿ ನುಡಿದು ಬ್ಲೇಕರು ಇಲಿನಳ ಕಡೆ ಹೊರಳಿ ಎಂದರು: "ನೀನು ಬಲು ಜಗಳಗಂಟ ಹೆಣ್ಣುಕಣೆ! ನಿನ್ನಂಥವಳಿಗೆ ಏನೂ ಸಹಾಯ ಮಾಡಬೇಕೆಂದು ನನ್ನ ಮನಸ್ಸಾಗುವುದಿಲ್ಲ ನನ್ನನ್ನಿಲ್ಲಿಗೆ ಕರೆಸಲು ನೀನೇಕೆ ಕೇಳಿಕೊಂಡೆ?"

"ಅಂದರೆ, ಈ ಠಾಣ್ಯದ ಜುಮುಗುಟ್ಟುವ ಹೊಲಸು ಕತ್ತಲೆ ಕೋಣೆಯಲ್ಲಿ ಈ ರಾತ್ರಿಯನ್ನು ಕಳೆಯುವುದು ನನಗೆ ಬಹಳ ಇಷ್ಟವೆಂದು ತಿಳಿದಿರಾ? ರಾತ್ರಿ ನಾನಿಲ್ಲಿ ಇರಲಾರೆ."

"ನೀನೇನೂ ಅಂಜಬೇಡ. ಮುಂಜಾನೆ ಕಿಂಚಿತ್ ದಂಡವನ್ನು ತೆತ್ತರಾಯಿತು, ನಿನ್ನ ಬಿಡುಗಡೆಯಾಗುವುದು."

ಹಾಂ. ದಂಡ ಬಹಳವಾದರೆ ಹತ್ತು ಶಿಲಿಂಗ್ ತಾನೆ? ಅಷ್ಟಕ್ಕಾಗಿ ನಾನು ಕಾತರಳಾಗಿದ್ದೇನೆಂದು ಬಗೆದಿರುವಿರಾ? ಏನೇ ಆಗಲಿ, ಈ ರಾತ್ರಿಯಲ್ಲಿಯೇ ಬಿಡುಗಡೆಯಾಗಬೇಕು.'' ಆಮೇಲೆ ಅವಳು ನಿರೀಕ್ಷಿತ ವ್ಯಥಾ ಸ್ವರದಲ್ಲಿ, ''ನಾನು ಬಹಳ ಸಂಕಟದಲ್ಲಿ ಬಿದ್ದಿದ್ದೇನೆ ಮಿ. ಬ್ಲೇಕ್, ದಯವಿಟ್ಟು ನನ್ನನ್ನು ಉದ್ಧಾರಮಾಡಿರಿ.''

''ನಿನ್ನ ಈ ಮಾತನ್ನು ನಾನೇಕೆ ನಡೆಸಬೇಕು?''

''ಮತ್ತೊಬ್ಬರೆದುರು ಆ ಮಾತು ಹೇಳುವಂತಿಲ್ಲ- ನೀವೊಬ್ಬರೇ ಇದ್ದಿದ್ದರೆ ಸಹಜವಾಗಿ ಹೇಳುತ್ತಿದ್ದೆ.''

ಬ್ಲೇಕ್ ಪ್ರೈವಿಯವರ ಮುಖ ನೋಡಿದರು. ಅವರ ಇಂಗಿತವನ್ನರಿತು ಅವರು, ''ಒಳ್ಳೇದು, ನಿಮ್ಮನ್ನು ಬೇರೆ ಕೋಣೆಗೆ ಕಳಿಸುತ್ತೇನೆ'' ಎಂದು ನುಡಿದು ಬಾಗಿಲು ತೆರೆದು, ಪಕ್ಕದ ಕೋಣೆಯನ್ನು ಬೆರಳಿಂದ ತೋರಿಸಿದರು.

ಬ್ಲೇಕ್ ಆ ಕೋಣೆಯನ್ನು ಪ್ರವೇಶಿಸಿದರು. ಎಲಿನ್ ಸೋತ ಹೆಜ್ಜೆಗಳನ್ನು ಚೆಲ್ಲುತ್ತ ಅವರನ್ನು ಹಿಂಬಾಲಿಸಿದಳು. ಬಾಗಿಲಿಕ್ಕಿಕೊಂಡ ಮೇಲೆ ಇಲಿನ್ ಬ್ಲೇಕರೆದುರು ನೀಟಾಗಿ ನಿಂತುಕೊಂಡಳು–ಒಂದು ಕ್ಷಣದಲ್ಲಿಯೇ ಅವಳ ಮತ್ತೆಲ್ಲ ಇಳಿದುಹೋಯಿತೋ ಏನೋ! ಎಂಥ ಅದ್ಭುತ ನಟನೆಯವಳದು! ಇನ್ಸ್‌ಪೆಕ್ಟರ್ ಮಾತ್ರವೇ? ಏಕೆ ಬ್ಲೇಕರೂ ಇದು ಕೇವಲ ಅಭಿನಯವೆಂದು ಅರಿಯದೆ ಹೋದರು! ಅವರು ಅತ್ಯಂತ ವಿಸ್ಮಯದಿಂದ ಅವಳ ಮೋರೆ ನೋಡುತ್ತ ನಿಂತರು ಯಾವ ಉದ್ದೇಶದಿಂದ ಅವಳು ಪ್ರಜ್ಞಾಹೀನಳಂತೆ ನಟಿಸಿ ಪೋಲಿಸರ ಬಲೆಗೆ ಬಿದ್ದಳೆಂಬುದು ಅವರಿಗೆ ತಿಳಿಯಲಿಲ್ಲ.

ಇಲಿನ್ ಗಂಭೀರಸ್ವರದಿಂದ ಹೇಳಿದಳು: ''ಅವರೊಡನೆ ಸ್ವಲ್ಪ ಮೋಜು ಮಾಡಿದೆ ಮಿ. ಬ್ಲೇಕ್! ನನಗೆ ಅತ್ಯಂತ ಅಗತ್ಯದ ಕೆಲಸವಿದೆ. ಒಂದು ರಾತ್ರಿ ಕೂಡ ಅದನ್ನು ತಡೆದಿಡಲು ಬರುವಂತಿಲ್ಲ. ಶೀಘ್ರದಲ್ಲಿಯೇ ಮುಕ್ತಳಾಗಲಿಕ್ಕೆ ಬೇಕು ನಾನು. ನಾಳೆ ನನ್ನದೇನಾದೀತು ಏನು ಬಿಟ್ಟೀತು ಎಂದು ನೀವು ಚಿಂತಿಸುವ ಅಗತ್ಯವಿಲ್ಲ. ನಾಳೆ ಸಕಾಲಕ್ಕೆ ಕೋರ್ಟಿಗೆ ಹಾಜರಾಗಿ ಆಗುವ ದಂಡವನ್ನು ನಿರ್ವಹಿಸುವೆ.''

''ನೀನೊಬ್ಬ ಮಹಾಮೂರ್ಖಳು! ಅಗತ್ಯದ ಕೆಲಸವಿರುವಾಗ ಪೋಲಿ

ಸರ ಕೈಯಲ್ಲಿ ಸಿಕ್ಕುಬೀಳುವುದೇಕೆ, ಮತ್ತೆ ಕೂಡಲೆ ಬಿಡುಗಡೆಯಾಗಬೇಕೆಂಬ ಈ ವ್ಯಾಕುಲ ಬೇರೆ ಏಕೆ?"

ಇಲಿನ್ ನಸುನಕ್ಕಳು: "ಇದು ನಿಮಗೆ ತಿಳಿಯಲಿಲ್ಲವೆ? ನಾನೊಬ್ಬಳೇ ಮೂರ್ಖಳೆ? ನಿಮ್ಮನ್ನು ಕಾಣದೆ ಗತ್ಯಂತರವಿರಲಿಲ್ಲ; ಆದರೆ ನಿಮ್ಮ ಮನೆಗೆ ಬರುವ ಹಾಗಿಲ್ಲ. ಅದರ ಕಾರಣವನ್ನು ಹೇಳಲಾರೆ, ನೀವೇ ಊಹಿಸಿಕೊಳ್ಳು ವುದುತ್ತಮ. ಪೋಲಿಸರ ವಶದಲ್ಲಿ ಯಾವನೊಬ್ಬ ಅಮಲೇರಿಪವನು ಠಾಣ್ಯಕ್ಕೆ ಹೊರಟಿದ್ದರೆ ಯಾರಾದರೂ ಹಿಂಬಾಲಿಸುವರೆ? ಯಾವ ಶತ್ರುವಾದರೂ? ಜಿಲ್ಬರ್ಟ್ ಹೇಳಿಹೋಗಿದ್ದಾರೆ–ತಾವು ಬರುವ ವರೆಗೂ ಏನಾದರೂ ಮಾಡುತ್ತ ಹೊತ್ತುಗಳೆಯಬೇಕಂತೆ. ಹೀಗೆ ಮಾಡಿದ್ದೇನು ಕೆಟ್ಟೀ?"

"ತಿಳಿಯಿತು. ನೀವು ಇನ್ನೊಂದೇನೋ ಗೊಂದಲವನ್ನೆಬ್ಬಿಸುತ್ತಿದ್ದೀರಿ: ಅದಕ್ಕಾಗಿ ನನ್ನ ಹೊಣೆ ಪಡೆದು ಬಿಡುಗಡೆ ಹೊಂದಲು ಯತ್ನಿಸುತ್ತಿರುವೆ

"ಮಿ. ಬ್ಲೇಕ್ ಇಲ್ಲಿ ನೋಡಿ, ನಾನು ಮೂರ್ಖಳಿರಬಹುದು ಆದರೆ ನೀವು ಒಳ್ಳೇ ವಿಚಾರವಂತರು; ಆದರೂ ನಿಮಗೆಲ್ಲವೂ ತಿಳಿದಿಲ್ಲ ಹೀಗೆ ತಿಳಿಯಿರಿ: ನಾನು ನಿಮ್ಮ ಕೈಯಲ್ಲಿ ಒಂದು ಮಹತ್ವಾದ ವಸ್ತುವನ್ನೇನಾದರೂ ಕೊಟ್ಟರೆ?"

"ಅದೇನು ಅಂಥ ದೊಡ್ಡ ವಸ್ತು?"

"ಅಂಥ ದೊಡ್ಡ ಕಾರ್ಯದ ಭಾರ ನಿಮ್ಮ ಮೇಲೆ ಬಿದ್ದರೆ–ಆಣೆಮಾಡಿರಿ ಮಿ. ಬ್ಲೇಕ್–ಅದನ್ನು ನೀವೇ ಸ್ವತಃ ಹೊರಬೇಕು. ಅದನ್ನು ಹೊರಗೆಳೆಯಲು ಬಲೆ ಬೀಸುವ ಮೊದಲು ಯಾರ ಸಹಾಯವನ್ನೂ ತಕ್ಕೊಳ್ಳುವುದಿಲ್ಲವಷ್ಟೆ?"

"ನನ್ನ ಸ್ವೀಕೃತ ಕಾರ್ಯವನ್ನು ನಾನೇ ನಿರ್ವಹಿಸಿಕೊಳ್ಳುವೆನೆಂಬುದು ನಿನಗೆ ಗೊತ್ತೇ ಇದೆ. ಕಾರ್ಯಸಿದ್ಧಿಗಾಗಿ ಮತ್ತೊಬ್ಬರ ನೆರವನ್ನು ತಕ್ಕೊಳ್ಳುವವನಲ್ಲ."

"ಹಾಗಾದರೆ ಮಾತುಕೊಡಿರಿ: ಈ ಪ್ರಕರಣದಲ್ಲಿ ನನ್ನ ಮತ್ತು ಜಿಲ್ಬರ್ಟರ ಹೆಸರನ್ನು ಗುಟ್ಟಾಗಿಡುತ್ತೇವೆಂದು."

"ಒಳ್ಳೇದಾಗಲಿ, ನಿನ್ನ ಅಕೃತ್ರಿಮ ವಿನಯದ ಮರ್ಯಾದೆಯನ್ನು ಕಾಯುತ್ತೇನೆ."

"ಸರಿ, ನನ್ನ ಹೇಳುವುದು ಕೇಳುವುದು ಮುಗಿಯಿತು. ಇನ್ನು ಕೆಲಸ."

ಎಲಿಸ್ ಬಾಗಿ ತನ್ನ ಕಾಲಲ್ಲಿ ಮೆಟ್ಟಿದ್ದ ಬೂಟಿನೊಳಗಿಂದ ಏನೋ ಒಂದು ವಸ್ತುವನ್ನು ತೆಗೆದು ಬ್ಲೇಕರ ಕೈಯಲ್ಲಿಟ್ಟಳು. ಅದೊಂದು ನಾಣ್ಯಾಕಾರದ ಹಿತ್ತಾಳೆಯ ಪದಕ. ಅದರ ಮಧ್ಯದಲ್ಲಿ '೪೫' ಎಂಬ ಸಂಖ್ಯೆ. ಬ್ಲೇಕ್ ಪದಕವನ್ನು ಹೊರಳಿಸಿ ನೋಡಿದರು. ಗಾಜಿನ ಕಾಜಿನ ಆವರಣ ಪಂಕ್ತಿ ದುಂಡುಗಾದ ಸ್ವಚ್ಛ ಆವರಣವಿತ್ತು; ಅದರೊಳಗಡೆ ಪದಕದಲ್ಲಿ '೪೫' ಕೆತ್ತಿತ್ತು. ಅದರ ಈ ಸಂಖ್ಯೆ ಹಳದಿ ಮೂಡಿಯ ಹಸಿರು ಬಣ್ಣದಿಂದ ರಂಜಿತವಾಗಿತ್ತು.

"ಏನಿದು?" ಕುತೂಹಲದಿಂದ ಬ್ಲೇಕ್ ಕೇಳಿದರು.

"ಏನೋ! ನನಗೇ ಗೊತ್ತಿಲ್ಲ. ನಿಮಗೆ ಹೇಗೆ ಹೇಳಬೇಕು? ಪ್ರಕರಣ ಮಾತ್ರ ಭಯಂಕರ ಎಂದಿಷ್ಟೇ ಹೇಳಬಲ್ಲೆ. ತಿಳಿಯಿತೇ—ಭಯಂಕರ ಪ್ರಕರಣ! ಆದರೆ ನೀವು ವ್ಯರ್ಥವಾಗಿ ವೇಳೆ ಹಾಳುಮಾಡುತ್ತಿದ್ದೀರಿ."

"ಎಲ್ಲಿ ಸಿಕ್ಕಿತು ಇದು?"

"ಊಂ. ಅದನ್ನೇನು ಹೇಳಲಿ?"

"ಅಲ್ಲ, ಇದರ ವಿಷಯ ಏನೂ ಗೊತ್ತಿಲ್ಲ ಅನ್ನುತ್ತೀ, ಮೇಲೆ ಹೇಳುತ್ತೀ, ಪ್ರಕರಣ ಮಹಾಭಯಂಕರ! ಯಾವ ಭಯಂಕರ ಪ್ರಕರಣ?"

"ಎಲ್ಲಾ ಸಮಯಗಳಲ್ಲೂ ಎಲ್ಲವನ್ನೂ ತಿಳಿಯುವುದು ನಿರಾಪದವಲ್ಲ. ಕೆಲ ಕೆಲವು ವಿಷಯಗಳು ಅತ್ಯಂತ ವಿಪಜ್ಜನಕವಾಗಿರುವವು, ಆ ಬಗ್ಗೆ ಎಲ್ಲ ಕಡೆ ಯೋಚಿಸುವುದು ಉಚಿತವಲ್ಲ."

"ನಿನ್ನ ಮಾತು ಬರಬರುತ್ತ ಹೆಚ್ಚು ಹೆಚ್ಚು ತೊಡಕಿನದಾಗುತ್ತಿದೆ."

"ಒಂದು ಉದಾಹರಣೆ ಕೊಟ್ಟರೆ, ತೊಡಕು ಕಡಿಮೆಯಾಗಬಹುದೆಂದು ಕಾಣುತ್ತದೆ: ಯಾವನೊಬ್ಬ ಮನುಷ್ಯನ ಸಂಕೇತ ಚಿಹ್ನ ಬಿಚ್ಚಿಬಿತ್ತೆಂದು ತಿಳಿಯಿರಿ; ಅದೊಂದು ಭಯಂಕರ ಪ್ರಕರಣವೆಂದು ಎನಿಸುವುದಿಲ್ಲವೆ?"

ಬ್ಲೇಕರು ಪದಕವನ್ನು ಹೊರಳಿಸಿ ತಿರುಗಿಸಿ ಪರೀಕ್ಷಿಸತೊಡಗಿದರು. ಎಪ್ರಿಲ್ ಫೂಲ ಮಾಡುವುದು ಇಲಿನಳ ಅಭ್ಯಾಸ—ಇದೂ ಎಪ್ರಿಲ್ ಫೂಲಿನ ಯೋಜನೆಯಿರಲಾರದಷ್ಟೆ? ಎಂದು ಯೋಚಿಸಿಕೊಂಡು, "ನಿನ್ನ ಮಾತಿನ ಅರ್ಥವೇನು? ಹತ್ಯಾಕಾಂಡವೆ?" ಎಂದು ಪ್ರಶ್ನಿಸಿದರು.

"ನನ್ನ ಮಾತಿನ ಅರ್ಥವನ್ನು ಹೊರಗೆಡವಬೇಕಾದರೆ, ನೀವಿನ್ನು ಹೊರಡಿಸಿರಿ."

"ವೈನ್‌ಸ್ಟ್ರೀಟ್ ಠಾಣ್ಯದಿಂದ ನಿನ್ನನ್ನೇ?"

"ಅಲ್ಲದೆ ಇದರ ರಹಸ್ಯ ಸೂತ್ರವನ್ನು ಕೂಡ. ಆದರೆ ಮರೆಯಬೇಡಿ, ಇದು ವಿಪಜ್ಜನಕ!"

"ನಿನಗೆ ಸತ್ಯವಾಗಿ ಇದು ವಿಪಜ್ಜನಕವೆನಿಸುತ್ತಿದ್ದರೆ, ಈ ಮಾತು ನಂಬತಕ್ಕದ್ದೇ. ಏನೇ ಆಗಲಿ, ನನ್ನ ಹೊಣೆಯಿಂದ ನಿನ್ನನ್ನು ಬಿಡಿಸುತ್ತೇನೆ. ನಾಳೆ ವಿಚಾರಣೆಯ ಕಾಲಕ್ಕೆ ಚಕ್ಕರ್ ಕೊಟ್ಟು ನನ್ನನ್ನು ತೊಂದರೆಗೀಡು ಮಾಡಬೇಡ ಮತ್ತೆ."

"ಸ್ವಲ್ಪ ದಂಡದ ಅಂಜಿಕೆಯಿಂದ ಓಡಿ ಹೋಗಿ ನಿಮ್ಮನ್ನು ತೊಂದರೆಗೆ ಸಿಕ್ಕಿಸುವೆನೇ ನಾನು? ಇದೆಂಥ ಮಾತು!"

"ಒಳ್ಳೇದು ನಡೆ. ನಾವು ಬಹಳ ಹೊತ್ತು ಏಕಾಂತದಲ್ಲಿ ಮಾತಾಡಿದೆವು ಪಾಪ, ಇನ್ಸ್‌ಪೆಕ್ಟರು ಅಧೀರರಾಗಿರಬಹುದು."

ಬಳಿಕ ಬ್ಲೇಕರು ಹೊಣೆ ಪತ್ರಕ್ಕೆ ಅಂಕಿತ ಹಾಕಿ ಎಲಿನಳೊಡನೆ ಠಾಣ್ಯದಿಂದ ಹೊರಬಿದ್ದರು. ಬೀದಿಗೆ ಬಂದು ಪದಕವನ್ನು ಜೇಬಿನಿಂದ ತೆಗೆದು ಮತ್ತೊಮ್ಮೆ ನೋಡಿದರು. ಕತ್ತಲೆಯಲ್ಲಿ '೨೬' ಅಂಕೆ ಥಕಥಕ ಹೊಳೆಯಿತು-ಬೆಳಕಿನಿಂದಲೇ ಬರೆದಿದ್ದಾರೋ ಎಂಬಂತೆ. ಪದಕವನ್ನು ತಿರುಗಿಸಿದರು, 'ಳ೫' ಕತ್ತಲೆಯಲ್ಲಿ ಕಾಣಿಸಲಿಲ್ಲ. ಒಂದು ಅಂಕೆ ಮಿಂಚುತ್ತಿದೆ, ಒಂದು ಮಾಯವಾಗಿದೆ! ಇದರ ರಹಸ್ಯವೇನು?

"ಬಯಲು ಹವೆಗೆ ಬಂದು ಬದುಕಿದೆ!" ಎಲಿನ್ ನುಡಿದಳು: "ಆದರೆ ಬಹಳ ಚಳಿ. ಈಗ ಒಂದು ಗ್ಲಾಸು ಹೊಟ್ಟೆಗೆ ಬಿದ್ದರೆ ಮೈ ಚುರುಕಾಗುವುದು. ಆದರೆ ನನ್ನ ಕೈಚೀಲ ಮುರಾಟೆಯ ನೃತ್ಯಮಂದಿರದಲ್ಲಿ ಕಳೆದುಕೊಂಡು ಬಂದಿದ್ದೇನೆ-ಹತ್ತರ ಏನೂ ಹಣವಿಲ್ಲ. ನೀವೇ ಅನುಗ್ರಹ ಮಾಡಬೇಕು; ಒಂದು ಗ್ಲಾಸು ಬೀಳದಿದ್ದರೆ ಹುರುಪೇ ಬರಲಾರದು."

"ರಾತ್ರಿ ೧೨ ಹೊಡೆದು ಹೋಗಿದೆ; ಈಗೆಲ್ಲಿ ಸಿಕ್ಕೀತು? ಮೊದಲ ಯಾಮದಲ್ಲಿ ಕುಡಿದಷ್ಟಕ್ಕೇ ಪ್ರಜ್ಞೆ ಕಳಕೊಂಡಿದ್ದೀ ಮತ್ತೇಕೆ ಈಗ? ಈ ಹಟ ನನ್ನ ಬಳಿ ನಡೆಯಲಾರದು."

"ಆದರೆ ನನಗೆ ಏನಾದರೂ ಬೇಕು. ಮದ್ಯ ಸಿಕ್ಕದಿದ್ದರೆ ಯಾವುದಾದರೂ ಕಾಫಿ ಅಂಗಡಿಗೆ ಕರೆದುಕೊಂಡು ಹೋಗಿರಿ."

ಅವರಾಗ ಸರ್ಕಸಿನ ಬಳಿ ಬಂದಿದ್ದರೂ, ಅದರ ಹತ್ತಿರದ ಕೆಫೆ ಇಡೀ ರಾತ್ರಿ ತೆರೆದಿರುತ್ತಿತ್ತು. ಇಲಿನಳಿಗೆ ಅದು ಪರಿಚಿತ. ಅವಳ ಸೂಚನೆಯಂತೆ ಬ್ಲೇಕರು ಅವಳೊಂದಿಗೆ ಅಲ್ಲಿಗೆ ಹೋದರು. ಮಧ್ಯರಾತ್ರಿ ಮೀರಿದ್ದರೂ ಜನರ ಗದ್ದಲ ತುಂಬಾ ಇತ್ತು. ಅವರಲ್ಲಿ ಬಹುಮಂದಿ ಕಿಸೆ ಕತ್ತರಿಸುವವರು, ಕಳ್ಳರು, ದರೋಡೆಗಾರರು ಎಂಬುದನ್ನು ಅವರ ಮುಖ ನೋಡಿಯೇ ಬ್ಲೇಕ್ ತಿಳಿದುಕೊಂಡರು. ಅರಿಯದವರಿಗೆ ಭಾವಭಂಗಿಗಳಿಂದ ಸಜ್ಜನರಂತೆ ಕಾಣುತ್ತಿದ್ದ ಆ ಮಂದಿಯಲ್ಲಿ ತುಡುಗ ತುಂಟರ ಸಂಖ್ಯೆಯೇ ಹೆಚ್ಚಾಗಿತ್ತು.

ನೆರೆದವರಲ್ಲಿ ಅನೇಕ ಸ್ತ್ರೀಪುರುಷರು ಬ್ಲೇಕರ ಗೊತ್ತಿನವರು. ಶ್ರೇಷ್ಠ ದರ್ಜೆಯ ಉಡಿಗೆ ತೊಡಿಗೆ ಧರಿಸಿದ ಒಬ್ಬ ಯುವತಿಯೊಡನೆ ಆ ನಟ್ಟಿರುಳಲ್ಲಿ ಆಸ್ಥಾನಕ್ಕೆ ಬ್ಲೇಕ್ ಬಂದುದರಿಂದ ಎಲ್ಲರಿಗೂ ವಿಸ್ಮಯವಾಯಿತು. ಬ್ಲೇಕರನ್ನು ಸಂಯಮಿ, ಸುಚರಿತ್ರರೆಂದು, ಪ್ರಮದಾ ಪ್ರಸಂಗದಲ್ಲಿ ಅರಸಿಕರೆಂದು ತಿಳಿದಿದ್ದವರು ಸಾಶಂಕರಾಗಿ ನೋಡತೊಡಗಿದರು

ಅನೇಕರು ಬ್ಲೇಕರನ್ನು ಕಂಡು ಅಭಿವಂದಿಸಿದರು. ಅವರಲ್ಲಿ ಹಲವರು ಠಕ್ಕರು, ಸೆರೆಮನೆಯಿಂದ ಬಿಡುಗಡೆ ಹೊಂದಿ ಸ್ವಾತಂತ್ರ್ಯವನ್ನು ಅನುಭವಿಸ ಹತ್ತಿ ಕೆಲವೇ ದಿನಗಳಾಗಿದ್ದವು. ಬ್ಲೇಕರ ಸದ್ಭಾವನೆಯನ್ನು ಸಂಪಾದಿಸುವ ಉದ್ದೇಶದಿಂದ ಅವರನ್ನು ಗೌರವಿಸಿದರು. ಇನ್ನು ಕೊಂಚ ದಿನಗಳಲ್ಲಿ ತಾವು ಅವರ ಬಲೆಯಲ್ಲಿ ಬೀಳುವೆವೆಂದು ಅವರರಿಯರು, ಪಾಪ. ಅಂತೆಯೇ ಅವರನ್ನು ಮನ್ನಿಸಿ ಪ್ರಸನ್ನಗೊಳಿಸಲು ಹಾರೈಸಿದರು.

ಇಲಿನಳು ಕುಳಿತಳು. ಬ್ಲೇಕರು ಅವಳೆದುರಿನಲ್ಲಿ ಕುಳಿತು ಸುತ್ತಲೂ ನೋಡಿದರು. ಇವಳು ಯಾವ ಉದ್ದೇಶದಿಂದ ನನ್ನನ್ನಿಲ್ಲಿಗೆ ಕರೆತಂದಿರಬಹುದು? ನಾನು ತನ್ನ ಸಂಗಾತಿಯೆಂಬುದನ್ನು ಈ ಜನರೆದುರಿಗೆ ಪ್ರಮಾಣಪಡಿಸುವ ಆಗತ್ಯವಾದರೂ ಏನು? ಬ್ಲೇಕರೊಡನೆ ಸಂಬಂಧವುಂಟೆಂಬುದು ಕಳ್ಳಕಾಕರಿಗೆ ಗೊತ್ತಾಗುವುದು ಅವಳಿಗೆ ಅಪಾಯಕರವೇ. ಹಾಗಾದರೆ? ಇಲಿನಳ ಈ ವಿಲಕ್ಷಣ ವರ್ತನೆಯು ಕಾರಣವೇ ಬ್ಲೇಕರಿಗೆ ತಿಳಿಯದಾಯಿತು.

ಕಾಫಿಯ ಕಪ್ಪನ್ನು ತುಟಿಗೆ ಹಚ್ಚಿ ಬ್ಲೇಕ್ ಓರೆನೋಟದಿಂದ ನೋಡಿ

ದರು: ಅನೇಕರು ತನ್ನನ್ನೇ ದಿಟ್ಟಿಸುತ್ತಲಿದ್ದರು. ಅವರಲ್ಲಿ ಎಷ್ಟೋ ಜನ ರನ್ನು ಹಿಂದಕ್ಕೆ ಅವರು ನೋಡಿದ್ದರು; ಇಲಿನಳೂ ಅನೇಕರನ್ನು ಬಲ್ಲಳು. ಈ ಚತುರ ದಸ್ಯುಸ್ತ್ರೀಯೊಡನೆ ಬ್ಲೇಕರು ಅಪರಾತ್ರಿಯಲ್ಲಿ ಇಲ್ಲಿಗೇಕೆ ಬಂದಿರ ಬಹುದೆಂಬುದನ್ನು ಅವರು ತರ್ಕಿಸಲಾರದೆ ಹೋದರು.

ಆದರೆ ಇಲಿನಳ ಮಾನಸಿಕ ಚಾಂಚಲ್ಯವನ್ನು ಬ್ಲೇಕ್ ಗಮನಿಸಲಿಲ್ಲ. ಅವಳು ಅವರನ್ನು ಕುರಿತು ಬಡಬಡಿಸುತ್ತಲೇ ಇದ್ದಳು. ತನ್ನ ಮಾತಿನ ಕಡೆಗೆ ಅವರ ಲಕ್ಷ್ಯವಿಲ್ಲವೆಂಬುದನ್ನರಿತೂ ಅವಳು ಸುಮ್ಮನಾಗಲಿಲ್ಲ. ಅವರೊಡನೆ ತನ್ನ ಸಂಬಂಧ ಅದೆಷ್ಟು ಘನಿಷ್ಠವೋ ಎಂಬಂತೆ ವರ್ತಿಸುತ್ತಿದ್ದಳು. ಬ್ಲೇಕರು ಅವಳ ಮಾತಿನ ಹಳ್ಳಕ್ಕೆ ಒಡ್ಡನ್ನೂ ಹಾಕಲಿಲ್ಲ, ಹಾದಿಯನ್ನೂ ಮಾಡಿಕೊಡ ಲಿಲ್ಲ. ಹತ್ತು ನಿಮಿಷಗಳ ತರುವಾಯ ಅವಳೊವಿನ್ಮಗಿಲೆ ನೀರವತಾವಾದನ್ನು ಅವರು ಗಮನಿಸಿದರು. ಅವಳ ವಾಚಾಳಿತನ ಒಮ್ಮೆಲೆ ಲುಪ್ತವಾದುದನ್ನು ಕಂಡು ಅವರು ವಿಸ್ಮಯದಿಂದ ಅವಳ ಮೋರೆಯ ಕಡೆ ನೋಡಿದರು. ಅವಳ ಕೆನ್ನೆಗಳು ವಿವರ್ಣವಾಗಿದ್ದವು, ಸಪ್ಪೆಯಾಗಿದ್ದವು. ಆವಳು ಸ್ವಲ್ಪ ಸಂಯ ಮಿಸಿಕೊಂಡು ಮತ್ತೆ ಮೊದಲಿನಂತೆ ಕಲರವ ಮಾಡತೊಡಗಿದಳು. ಆದರವೆಲ್ಲ ಅರ್ಥರಹಿತ ವಿಲಾಪ.

ಬ್ಲೇಕ್ ಮುಖ ತಿರುಗಿಸಲಿಲ್ಲ. ಇಲಿನಳ ಹಿಂದಿನ ಗೋಡೆಗೆ ಒಂದು ದೊಡ್ಡ ಕನ್ನಡಿ ಹಾಕಿತ್ತು ಅವಳು ಕೋಣೆಯ ಬಾಗಿಲಿನ ಕಡೆ ಎವೆಯಿಕ್ಕದೆ ನೋಡುತ್ತ ಒಬ್ಬ ಮನುಷ್ಯನನ್ನು ನಿರುಕಿಸುತ್ತಿದ್ದುದು ಆ ಕನ್ನಡಿಯಲ್ಲಿ ಕಾಣು ತ್ತಿತ್ತು. ಬಾಗಿಲೆದುರಿಗೆ ಆ ಮನುಷ್ಯ ನಿಂತಿದ್ದ; ಅವನು ಎತ್ತರವಿದ್ದಷ್ಟೂ ಸ್ಥೂಲಕಾಯ;—ಉದ್ದಗಲ ಸಮಾನ. ಅತ್ಯಂತ ಬಲಿಷ್ಠನೆಂದೂ ತೋರು ತ್ತಿದ್ದ. ಕೊರಳ ಶಿರಗಳು ಉಬ್ಬಿ ಅಂಗಿಯ ಕೊರಳ ಪಟ್ಟಿಯನ್ನು ಕಿತ್ತೊಗೆ ಯಲು ಹವಣಿಸುತ್ತಿದ್ದವು. ತಲೆಯ ಮೇಲೆ ದೊಡ್ಡ ಡಬರಿ ಟೊಪ್ಪಿಗೆ. ಸ್ತಬ್ಧ ವಾಗಿ ನಿಂತುಕೊಂಡು ಕೆಫೆಯ ಜನಗಳನ್ನು ನೋಡುತ್ತಲಿದ್ದ.

ಮೇಜಿನ ಕೊನೆಯಲ್ಲಿ ಕುಳಿತಿದ್ದ ಮೂವರು ಆ ಮನುಷ್ಯನನ್ನು ಕಾಣು ತ್ತಲೆ ಎದ್ದು ತಟ್ಟನೆ ಬಾಗಿಲ ಕಡೆಗೆ ನಡೆದರು. ನಿಂತಿದ್ದ ಆ ಯುವಕನು ಅವರಿಗೆ ಯಾವ ಸನ್ನೆಯನ್ನೂ ಮಾಡದೆ, ಅವರನ್ನು ನೋಡಲೇ ಇಲ್ಲ ವೆಂಬಂತೆ, ಆ ಸ್ಥಳದಿಂದ ಹೊರ ಹೊರಟ.

ಆ ಮೂವರೂ ಹೊರಟುಹೋದ ಬಳಿಕ ಬ್ಲೇಕ್ ಇಲಿನಳ ಮೋರೆ ನೋಡಿದರು. ಭಯದಿಂದ ಅವಳ ಕೈಯೆಲ್ಲ ನಡುಗುತ್ತಿತ್ತು. ಸಹಜ ಮಾತಿಗೆ ವಿಚಲಿತಳಾಗುವ ಹೆಂಗಸು ಇಲಿನಳಲ್ಲ ಎಂಬುದನ್ನು ಬ್ಲೇಕ್ ಬಲ್ಲರು. ಆದರೀಗ ಅವಳ ಮನಸು ಒಮ್ಮೆಲೆ ಗಾಬರಿಗೊಳ್ಳುವುದಕ್ಕೆ ಕಾರಣವೇನೆಂಬುದು ಅವರಿಗೆ ತಿಳಿಯಲಿಲ್ಲ.

"ಏನು ವಿಷಯ?" ಕುತೂಹಲದಿಂದ ಅವರು ಪ್ರಶ್ನಿಸಿದರು.

ಇಲಿನಳು ಉಪೇಕ್ಷೆಯಿಂದ ಉತ್ತರವಿತ್ತಳು– "ಏನಿಲ್ಲ! ನಾನು–ನಾನು –ನೋಡಿರಿ ಮಿ. ಬ್ಲೇಕ್, ನಾನೆನ್ನುತ್ತೇನೆ, ನೀವು ಶಿಪಾಯಿಗೆ ಹೇಳಿರಿ. ಅವನು ನನ್ನನ್ನು ಹೊರಗೆ ಕಳಿಸಿಬರಲಿ. ಶಿಪಾಯಿಯನ್ನು ಕರೆದು ಇಷ್ಟು ಹೇಳುವಿರಲ್ಲವೆ? ನಾನು ಈ ಸ್ಥಳದಿಂದ ಒಬ್ಬಳೇ ಹೋಗಬೇಕೆನ್ನುತ್ತೇನೆ, ತಿಳಿಯಿತೆ?"

ಬ್ಲೇಕರು ಮನಸಿನಲ್ಲಿಯೇ ಎಂದುಕೊಂಡರು. 'ಕೆಟ್ಟ ಜಾತಿ; ನನ್ನನ್ನೊಬ್ಬನನ್ನೇ ಇಲ್ಲಿ ಬಿಟ್ಟು ಜಾರಿಕೊಳ್ಳಬೇಕೆನ್ನುತ್ತಾಳಲ್ಲವೇ? ಇದರಲ್ಲೇನೋ ದುರುದ್ದೇಶವಿರಲಿಕ್ಕೆ ಬೇಕು, ಖಂಡಿತ. ಅದನ್ನು ನನಗೆ ತೋರುಗೊಡುತ್ತಿಲ್ಲ.' ಆದರೆ ಈ ಮನೋಭಾವವನ್ನು ಅಡಗಿಸಿಟ್ಟು "ಒಳ್ಳೇದು, ಹಾಗೇ ಆಗಲಿ" ಎಂದರು.

"ಧನ್ಯವಾದ. ನಾನು ಹೊರಗೆ ಹೋದೆನೆಂದರೆ ನೀವು ನನ್ನನ್ನು ಹಿಂಬಾಲಿಸಬೇಕು. ನನ್ನೊಡನೆ ಮಾತನಾಡಬಾರದು. ನನ್ನ ಮೇಲೆ ಕಣ್ಣಿಡುವುದೇ ನಿಮ್ಮ ಹೇತುವೆಂಬ ಹಾಗೆ ಬೆಂಬತ್ತಬೇಕು" ಎಂದು ನುಡಿದು ಇಲಿನಳು ಮೆಲುದನಿಯಿಂದ, "ಆಣೆಯಿದೆ, ನೀವು ನನ್ನನ್ನು ಕಣ್ಮರೆಯಾಗಗೊಡಬಾರದು" ಎಂದಳು

ಈ ರಹಸ್ಯಮಯ, ರಮಣಿಯ ಉದ್ದೇಶವಾದರೂ ಏನು? ಅವಳ ಈ ಲಹರಿಯ ಮರ್ಮ ಅವರಿಗೆ ತಿಳಿಯದಾಯಿತು. ಮನಸ್ಸಿನಲ್ಲಿ ಅತ್ಯಂತ ಕುತೂಹಲವಿದ್ದರೂ ಬ್ಲೇಕ್ ಯಾವ ಮಾತನ್ನೂ ಆಡಲಿಲ್ಲ.

೨

ಇಲಿನಳು ಎದ್ದು ಬ್ಲೇಕರನ್ನು ಅಭಿವಂದಿಸಿ ಬೀಳ್ಕೊಂಡಳು; ಅವರೂ

ಟೋಪ್ಪಿಗೆ ಮುಟ್ಟಿಕೊಂಡು ತಿರುಗಿ ಅಭಿವಂದಿಸಿದರು. ತಾವೂ ಅಲ್ಲಿಂದ ಹೊರ ಡಲು ಯಾವ ಅಡ್ಡಿಯೂ ಇರಲಿಲ್ಲ. ಆದರೂ ಅವಳು ಹೊರಟುಹೋದರೂ ಅವರು ಅಲ್ಲಿಯೇ ಕುಳಿತಿದ್ದರು.

ಇಲಿನಳ ಕಣ್ಣುಗಳಲ್ಲಿ ಭಯದ ಚಿಹ್ನೆಗಳು ಸ್ಪಷ್ಟವಾಗಿ ಕಂಡಿದ್ದವು. ಅವಳು ನಕ್ಕು ಹರಟೆ ಹೊಡೆದು ಟಕ್ಕಿಸಬೇಕೆಂದು ಹವಣಿಸಿದ್ದಳು. ಆದರೆ ಅವಳ ಮನಸ್ಸಿನಲ್ಲಿ ಮಾತ್ರ ಅಂಜಿಕೆ ತುಂಬಿತ್ತು. ಅದಕ್ಕೇನು ಕಾರಣ? ಅಲ್ಲಿ ಯಾರನ್ನು ಕಂಡು ಅಷ್ಟು ಬೆದರಿದ್ದಳು? ಬಾಗಿಲಲ್ಲಿ ನಿಂತಿದ್ದ ಆಯುಕನನ್ನು ನೋಡಿಯೋ?

ಬ್ಲೇಕ್ ಯೋಚಿಸತೊಡಗಿದರು. ಅದು ನಿಜವಿದ್ದರೆ ಆ ಯುವಕನ ಉದ್ದೇಶವೇನು? ಆ ಮೂವರೂ ಅದೇ ಸಮಯಕ್ಕೆ ಏಕೆ ಹೊರಟು ಹೋದರು? ಇದು ಮೊದಲೇ ಗೊತ್ತುಪಡಿಸಿದ್ದ ಕಾರ್ಯಕ್ರಮವೋ, ಇಲ್ಲವೆ ಅವರು ಕೂಡಿಯೇ ಹೊರಟಿದ್ದು ಆಕಸ್ಮಿಕವೋ?

ಹೋಟೆಲ್–ಕೆಫೆಗಳಲ್ಲಿ ಹೀಗೆ ಎಷ್ಟೋ ಜನ ಬಾಗಿಲಲ್ಲಿ ನಿಲ್ಲುವು ದುಂಟು, ಹೋಗುವುದೂ ಉಂಟು. ದಸ್ಯು–ದಸ್ಕರರು ರಾತ್ರಿ ಭೋಜನಾಲ ಯಗಳಲ್ಲಿ ಒತ್ತಟ್ಟಿಗೇ ಕುಳಿತು ಊಟ ಮಾಡುವುದು, ಆಗ ಒಬ್ಬರೊಡ ನೊಬ್ಬರು ಮಾತನಾಡುವುದು, ಬಳಿಕ ಕಳವಿಗಾಗಿ ತಂಡ ಕಟ್ಟಿಕೊಂಡು ಹೊರಡುವುದು–ಯಾವುದೂ ಬ್ಲೇಕರಿಗೆ ಅರಿಯದ್ದಲ್ಲ. ಆದರೆ ಹಲ್ಲನಾಗಲಿ ಅವನ ಗುಣವತಿ ಹೆಂಡತಿಯಾಗಲಿ ಯಾವುದೊಂದು ತಂಡಕ್ಕೆ ಸೇರಿ ಕಳವು ಮಾಡುತ್ತಿರಲಿಲ್ಲ. ಅವರು ಪ್ರತ್ಯೇಕವಾಗಿಯೇ ಎಲ್ಲ ಮಾಡುತ್ತಿದ್ದರು. ಆದ್ದ ರಿಂದ ಇಲಿನಳು ಆಕಸ್ಮಿಕವಾಗಿ ಹೊರಟು ಹೋದುದರ ಕಾರಣವು ಅವರಿಗೆ ತಿಳಿಯಲಿಲ್ಲ.

ಇಲಿನಳು ಹೋದ ಬಳಿಕ ಬ್ಲೇಕರು ಬೇಗನೆ ಹೊರಡದೆ ಸ್ವಲ್ಪ ಅಲ್ಲಿ ಯೇ ಕುಳಿತಿದ್ದರು. ಮತ್ತು ಪೂರ್ವೋಕ್ತ ಪದಕವನ್ನು ಕೈಯಲ್ಲಿ ಹಿಡಿದು ಯಾರಿಗೂ ಕಾಣದಂತೆ ಪರೀಕ್ಷಿಸುತ್ತಿದ್ದರು. ಹಾಗೆ ಪರೀಕ್ಷಿಸುತ್ತಿದ್ದಂತೆ ತಮ್ಮ ಹಿಂದೆ ಯಾರೋ ನಿಶ್ಶಬ್ದವಾಗಿ ಬಂದು ನಿಂತಂತೆ ಅವರಿಗೆ ಭಾಸವಾಯಿತು. ಮುಖ ತಿರುಗಿಸಿ ನೋಡಿದರು. ಆಗಂತುಕನು ನಟ್ಟ ನೋಟದಿಂದ ಅವರ ಕೈಯೊಳಗಿನ ಪದಕವನ್ನೇ ನೋಡುತ್ತಿದ್ದ. ಆದರೆ ಆ ಮನುಷ್ಯನು ತನ

ಅಸಭ್ಯ ಆಚರಣೆಗಾಗಿ ವಿಷಾದಿಸದೆ ಕರ್ಕಶ ಸ್ವರದಿಂದ ಮಾತನಾಡಿದ: "ಅದನ್ನು ಈ ಕ್ಷಣ ಒಗೆದು ಬಿಡು ಹುಚ್ಚಾ! ಅದು ಎಷ್ಟು ಅಪಾಯಜನಕವೆಂಬುದು ನಿನಗೆ ಗೊತ್ತಿರಲಿಕ್ಕಿಲ್ಲ—ಇವನ್ನು ಹತ್ತಿರ ಇಟ್ಟುಕೊಂಡರೆ ಸಾಯುತ್ತೀ!"

ಬ್ಲೇಕ್ ತೀಕ್ಷ್ಣ ದೃಷ್ಟಿಯಿಂದ ಆಗಂತುಕನನ್ನು ನೋಡಿದರು; ಗುರುತು ಹತ್ತಲಿಲ್ಲ. ಎತ್ತರ ಆಳು, ಬಡಕಾಟಿ ಶರೀರ ಗದ್ದದ ಎರಡೂ ಕಡೆ ವಿರಳವಾದ ಗಡ್ಡ; ಮುಖ ಮಲಿನ. ಯಾವುದೋ ಯುರೋಪೀಯ ಹೋಟೆಲಿನ ಸರಬರಾಯಿಯ ಪೇದೆ ಇರಬಹುದೆಂದು ಎನಿಸುತ್ತಿತ್ತು.

ಪದಕವನ್ನು ಜೇಬಿನಲ್ಲಿರಿಸಿಕೊಂಡು ಬ್ಲೇಕ್ ಹೇಳಿದರು. "ನಿನ್ನ ಮಾತು ಸತ್ಯವೇ ಇದ್ದೀತು. ಆದರೆ ನಾನು ಸಾಯುವುದು ಇನ್ನೂ ತಡ."

"ನನ್ನ ಅಭಿಪ್ರಾಯವನ್ನು ಕೇಳಿ ನೀನು ಬೇಸರಪಟ್ಟುಕೊಳ್ಳಬೇಡ" ಎಂದು ನುಡಿದು ಆ ಮನುಷ್ಯನು ಸಾವಕಾಶವಾಗಿ ಹೋಗಿ ಕೊಂಚ ದೂರದ ಮೇಜಿಗೆ ಕುಳಿತುಕೊಂಡ.

ಅಷ್ಟು ಹೊತ್ತಿಗೆ ಇಲಿನಳು ಕೆಫೆಯ ಹೊರಗೆ ಹೋಗಿದ್ದಳು. ಅವಳನ್ನು ಅನುಸರಿಸಲು ಇನ್ನು ವಿಲಂಬ ಮಾಡುವುದು ಸರಿಯಲ್ಲವೆಂದು ತಿಳಿದು ಬ್ಲೇಕರೂ ಹೊರಬಿದ್ದರು. ಅವರು ಬೀದಿಗಿಳಿದಾಗ ಇಲಿನಳು ಸ್ವಲ್ಪ ದೂರದಲ್ಲಿ ಕಂಡಳು. ಅವಳೊಬ್ಬಳೇ ಪೂರ್ವದಿಕ್ಕಿಗೆ ಹೊರಟಿದ್ದಳು. ಬ್ಲೇಕ್ ಅವಳನ್ನು ದೂರದೂರದಿಂದ ಅನುಸರಿಸಿದರು. ಬೀದಿಯಲ್ಲಿ ಗದ್ದಲವಿರಲಿಲ್ಲ. ಒಂದೆರಡು ಟ್ಯಾಕ್ಸಿಗಳು ಓಡಾಡುತ್ತಿದ್ದವು. ಇಲಿನಳನ್ನು ಮತ್ತೆ ಯಾರೂ ಅನುಸರಿಸಿದಂತೆ ಅವರಿಗೆ ಕಂಡುಬರಲಿಲ್ಲ. ಹಿಂದೆ ಹೊರಳಿ ನೋಡಿ ತನ್ನನ್ನೂ ಯಾರೂ ಅನುಸರಿಸಿಲ್ಲವೆಂಬುದನ್ನು ಮನವರಿಕೆಮಾಡಿಕೊಂಡರು.

ಇಲಿನಳು ಒಮ್ಮೆಯೂ ತಿರುಗಿ ನೋಡದೆ ಸಾಗಿದ್ದಳು. ಅವಳ ಕೈಯಲ್ಲೊಂದು ಹೊಳೆಯುವ ವಸ್ತುವಿತ್ತು. ಅದನ್ನವಳು ಆಗಾಗ ಹೋಗುಹೋಗುತ್ತಲೇ ತನ್ನೆದುರಿಗೆ ಹಿಡಿಯುತ್ತಿದ್ದಳು. ಅದು ಕನ್ನಡಿ ಇರಬೇಕು, ಅದರ ಸಹಾಯದಿಂದ ಅವಳು ತನ್ನ ಹಿಂಬದಿಯಲ್ಲಿ ಲಕ್ಷ್ಯವಿಟ್ಟು ನಡೆಯುತ್ತಿದ್ದಾಳೆ, ತನ್ನನ್ನು ಯಾರಾದರೂ ಹಿಂಬಾಲಿಸಿರುವರೋ ಹೇಗೆಂಬುದನ್ನು ನೋಡುತ್ತಿದ್ದಾಳೆ ಎಂದು ಬ್ಲೇಕರು ಅನುಮಾನಿಸಿಕೊಂಡರು.

ಕೊನೆಗೆ ಅವಳು ಒಂದು ಭಗ್ನವಾದ ಕಟ್ಟಡದ ಮುಂದೆ ಪಕ್ಕನೆ ನಿಂತ

ಳು. ಅದು ಕಾಸ್ಮೊ್ೀ ಪಾಲಿಸ್ ಹೋಟೇಲು. ಆಕಾರ ಪರಿವರ್ತನೆಯ ಸಲು ವಾಗಿ ಅದರ ಬಹುಭಾಗವನ್ನು ಕೆಡವಲಾಗಿತ್ತು. ಆ ಹೋಟೆಲಿನ ಎದುರಿನ ಬೀದಿಯಲ್ಲಿ ಒಂದು ಆಯುಷ್ಕರ್ಮಶಾಲೆ ಇತ್ತು. ಆ ಅಂಗಡಿಯ ಬಾಗಿಲ ಮರೆಯಲ್ಲಿ ಸ್ವಲ್ಪ ಹೊತ್ತು ಬ್ಲೇಕ್ ಕಾದುಕೊಂಡು ನಿಂತರು.

ಇಲಿನಳು ಏಕೆ ನಿಂತಳು? ಯಾರ ಆಗಮನವನ್ನಾದರೂ ನಿರೀಕ್ಷಿಸುತ್ತಿರ ಬಹುದೆ? ಬ್ಲೇಕರಿಗೆ ಯಾವುದೂ ತಿಳಿಯದು. ಬಾಗಿಲ ಮರೆಯಿಂದ ಇಣಿಕಿ ನೋಡಿದರು. ಇಲಿನಳು ತ್ರಸ್ತಭಾವದಿಂದ ಮತ್ತೆ ಹೋಗತೊಡಗಿದಳು. ಅವಳು ಸ್ವಲ್ಪ ಮುಂದುವರಿದ ಬಳಿಕ ಬ್ಲೇಕ್ ಅವಳನ್ನು ಹಿಂಬಾಲಿಸುವುದ ಕ್ಕಾಗಿ ಸಲೂನಿನ ಬಾಗಿಲ ಮರೆಯಿಂದ ಹೊರಬಿದ್ದರು. ಆಕ್ಷಣ ಇಬ್ಬರು ಪುಂಡರು ಹತ್ತಿರದ ಕತ್ತಲುಗವಿದ ಗುಪ್ತಸ್ಥಾನದಿಂದ ಬಂದು ಅವರನ್ನು ಅಡ ಗಟ್ಟಿದರು.

ಅವರಲ್ಲೊಬ್ಬನು, "ತಮ್ಮ ಹತ್ತಿರ ಕಡ್ಡಿಪೆಟ್ಟಿಗೆ ಉಂಟೆ?'' ಎಂದು ಕೈನೀಡಿದ.

ಬ್ಲೇಕ್ ಮುಂದುವರಿಯಲು ಹವಣಿಸುತ್ತ, ''ಇಲ್ಲ: ದಾರಿಬಿಟ್ಟು ಸರಿ ಯಿರಿ'' ಎಂದರು.

"ಸುಳ್ಳು ಹೇಳುವಿರಾ!'' ಎಂದು ಗರ್ಜಿಸಿ ಪುಂಡನು ಅವರ ಕೈಯನ್ನು ಗಟ್ಟಿಯಾಗಿ ಹಿಡಿದು ಬಲವಾಗಿ ಸೆಳೆದ.

ಆಗ ಬ್ಲೇಕರು ಸಿಟ್ಟಿನಿಂದ, ''ಬಿಡು ಕೈ, ಕಳ್ಳನಮಗನೇ'' ಎಂದು ನುಡಿದು ಅವನನ್ನು ತಳ್ಳಿ ದಾರಿಮಾಡಿಕೊಂಡರು.

ಅವರ ತಳ್ಳಿಕೆಯನ್ನು ನಿತ್ತರಿಸಿಕೊಳ್ಳಲಾರದೆ ಆ ಪುಂಡನು ಎರಡು ಮೊಳ ಹಿಂದಕ್ಕೆ ಹೋಗಿ ಬಿದ್ದನು. ತಕ್ಷಣವೇ ಅವನ ಸಂಗಡಿಗನು ಬ್ಲೇಕ ರೆದುರಿಗೆ ಬಂದು, "ನನ್ನ ಗೆಳೆಯನನ್ನು ನೂಕಿ ಕೆಡವಿದೆಯಾ ನೀಚ! ಸಾಯಿ ಹಾಗಾದರೆ–'' ಎಂದು ಕರ್ಕಶಸ್ವರದಿಂದ ನುಡಿದು ಅವರ ಕತ್ತಿಗೆ ಕೈಒಯ್ದನು

ಬ್ಲೇಕ್ ಚಪಲತೆಯಿಂದ ಅವನ ಗುರಿಯನ್ನು ತಪ್ಪಿಸಿದರು. ಸಮೀಪದ ಬೀದಿ ದೀಪದ ಬೆಳಕಿನಲ್ಲಿ ಪುಂಡನ ಕೈಯೊಳಗಿನ ಹರಿತವಾದ ಚೂರಿ ಮಿಂಚು ಗಿತು. ಆ ಚೂರಿಯ ಇರಿತದಿಂದ ಬ್ಲೇಕರ ಟೊಪ್ಪಿಗೆಯ ಅಂಚು ಕೊಂಚ ಕತ್ತರಿಸಿಹೋಯಿತು. ಅವರು ತತ್‌ಕ್ಷಣವೇ ಅವನ ಮುಖಕ್ಕೆ ಚೆನ್ನಾಗಿ

ಒಂದು ಗುದ್ದು ಕೊಟ್ಟರು. ಅದರಿಂದ ಆ ಪುಂಡ ತಲೆದಿಮ್ಮೆಂದು ನೆಲಹಿಡಿದನು. ಮರುಕ್ಷಣದಲ್ಲಿ ಅವನು ಚೇತರಿಸಿಕೊಂಡೆದ್ದು ಬ್ಲೇಕರ ಮೇಲೆರಗಲು ಹವಣಿಸುವುದರೊಳಗೇ ಅವರು ಇನ್ನೊಂದು ಪೆಟ್ಟನ್ನು ಕೊಟ್ಟು ಏಳದಂತೆ ಮಾಡಿದರು. ಅವನ ಅವಸ್ಥೆಯನ್ನು ಕಂಡು ಮೊದಲನೆಯ ಪುಂಡನು ಹಿಂದಿನಿಂದ ಬಂದು ಬ್ಲೇಕರ ಬೆನ್ನ ಮೇಲೆ ಬಿದ್ದನು.

ಅವನ ಆ ಒತ್ತಡಕ್ಕೆ ಬ್ಲೇಕರು ಸ್ವಲ್ಪ ಮುಂದೆ ಬಾಗಿದರು. ಆದರೆ ಗರಡಿಯಾಳಿನ ಹಿಡಿತದಿಂದ ಆ ಪುಂಡನ ಎರಡು ಕೈಗಳನ್ನು ಕಂಕುಳದಲ್ಲಿ ಅವುಕಿ ಹಿಡಿದು, ಅವನನ್ನು ಲಾಗ ಹೊಡಿಸಿ ಮುಂದೆ ಒಗೆದರು. ಅಷ್ಟರಲ್ಲಿಯೇ ಮತ್ತೊಬ್ಬನು ಸಾವರಿಸಿಕೊಂಡೆದ್ದು ಹೂಂಕರಿಸುತ್ತ ಏರಿಬಂದು ಬ್ಲೇಕರ ಜಾಕೀಟನ್ನು ಸೆಳೆದುಕೊಂಡನು.

ಬ್ಲೇಕರು ಆಗ ನೀಟಾಗಿ ನಿಂತುಕೊಂಡಿದ್ದರು ಅವರ ಹೊಡೆತಗಳಿಂದ ಪುಂಡರಿಬ್ಬರೂ ಮೆತ್ತಗಾಗಿದ್ದರು. ಅವರು ದಣಿದು ಪಕ್ಕಕ್ಕೆ ಸರಿದು ನಿಂತರು ಕ್ಷಣದ ವಿಶ್ರಾಂತಿಯ ಅನಂತರ ಇಬ್ಬರೂ ಒಟ್ಟಿಗೆ ದಾಳಿಯಿಟ್ಟರು. ಒಬ್ಬನು ಚೂರಿಯನ್ನು ಪ್ರಯೋಗಿಸಿದನು. ಬ್ಲೇಕರು ಚಂಗನೆ ನೆಗೆದು ಏಟನ್ನು ತಪ್ಪಿಸಿಕೊಂಡರು. ಅವರು ಮತ್ತೆ ಅವರ ಮೇಲೆ ಆಕ್ರಮಣ ಮಾಡತಕ್ಕವರು. ಅಷ್ಟರೊಳಗೆ ಮೂರನೆಯವನೊಬ್ಬನು ಇನ್ನೊಂದು ದಿಕ್ಕಿನಿಂದ ಓಡುತ್ತ ಬಂದನು.

"ಅವನನ್ನು ಹಿಡಿಯಿರಿ; ಜೋಕೆ, ಬಿಟ್ಟುಗಿಟ್ಟೀರಿ." ನಾನೀಗ ಬಂದೆ.'' ಎಂದು ಅವರಿಗೆ ಹೇಳಿದನು.

ಆದರೆ ಮತ್ತೆ ಮತ್ತೆ ಆದ ಸೋಲು, ವಿವಿಧಾಂಗಗಳಿಗೆ ಬಿದ್ದ ಬಲವಾದ ಏಟುಗಳಿಂದ ಆ ಪುಂಡರಿಬ್ಬರೂ ಬಲಹೀನರಾಗಿದ್ದರು. ಅವರು ಭೀತರಾಗಿ ಅಲ್ಲಿಂದ ಕಾಲ್ತೆಗೆದರು. ಅದೇ ಸಮಯಕ್ಕೆ ಮೋಟರೊಂದು ಬಂದಿತು; ಆಗಲೇ ಗುಂಡೊಂದು ಬ್ಲೇಕರ ತಲೆಯ ಮೇಲ್ಗಡೆ ಶಬ್ದಮಾಡುತ್ತ ಹಾಯ್ದು ಹೋಯಿತು. ಅವರು ವಿಸ್ಮಯದಿಂದ ಮೋಟರಿನ ಕಡೆ ನೋಡಿದರು. ದ್ರುತಗಾಮಿನಿಂದ ಅದು ನಿಮಿಷಾರ್ಧದಲ್ಲಿಯೇ ಕಣ್ಮರೆಯಾಯಿತು.

ಅಕಸ್ಮಾತ್ತಾಗಿ ಅಂಗಡಿಯೊಳಗಿಂದೊಬ್ಬನು ಹೊರಗೆ ಬಂದು, "ನಿಮಗೆ ಗಾಯವಾಗಿದೆಯೆ?" ಎಂದು ಉತ್ಕಂಠಿತ ಸ್ವರದಿಂದ ಪ್ರಶ್ನಿಸಿದ.

ಈ ಅಪರಿಚಿತ ವ್ಯಕ್ತಿ ಯಾವನೆಂದು ಬ್ಲೇಕರು ಅವನ ಮೋರೆ ನೋಡಿ

ದರು. ಅವನೂ ಅವರಂತೆ ದೀರ್ಘಕಾಯನು; ವಯಸ್ಸು ಚಿಕ್ಕದು; ಬಲಶಾಲಿಯಾದ ಯುವಕ.

''ಗುದ್ದಾಡುವಾಗ ಒಂದೆರಡು ಪೆಟ್ಟು ಬಿದ್ದಿವೆಯಷ್ಟೆ ಅಂಥ ದೊಡ್ಡ ಆಘಾತವೇನಾಗಿಲ್ಲ. ಆದರೆ ಅವರು ನನ್ನ ಜಾಕೀಟನ್ನು ಕಸಿದುಕೊಂಡು ಹೋಗಿದ್ದಾರೆ. ಆದರಿಂದ ಅವರಿಗೆ ಸ್ವಲ್ಪ ಲಾಭವಾದೀತು."

''ಅವರ ಉದ್ದೇಶವೇನು ಗೊತ್ತಾಯಿತೊ? "

''ಸರಿಯಾಗಿ ತಿಳಿಯಲಿಲ್ಲ. ಅವರು ನನ್ನೆದುರಿಗೆ ಬಂದು 'ಕಡ್ಡಿಪೆಟ್ಟಿಗೆ ಉಂಟೇ?' ಎಂದು ಕೇಳಿದರು. ಪುಂಡಾಟಿಕೆಯ ಸೂತ್ರಪಾತವಾದದ್ದು ಹೀಗೆ. ಜೇಬಿನಿಂದ ಕಡ್ಡಿಪೆಟ್ಟಿಗೆ ತೆಗೆಯುವಾಗ ಅವರಿಗೆ ಆಕ್ರಮಣಮಾಡಲು ಅವಕಾಶ ಸಿಕ್ಕುತ್ತಿತ್ತು. ನಾನು 'ಇಲ್ಲ' ಎಂದು ಹೇಳಿದೆ.

"ಮೋಟರ್ ಕಾರು?''

"ಅದು ಯಾರದೋ ಗೊತ್ತಿಲ್ಲ. ಈ ರಹಸ್ಯವು ದುರ್ಭೇದ್ಯವಾದದ್ದು. ಅದರೊಳಗಿದ್ದವನು ಮಾತ್ರ ನನ್ನ ಪರಮ ಮಿತ್ರ. ಓಡುವ ಬಂಡಿಯೊಳಗಿಂದ ನನಗೆ ಗುಂಡು ಹಾರಿಸಿದ. ಮೊದಲಿನಿಂದಲೂ ಅವರು ಈ ರೀತಿ ಎಣಿಕೆ ಹಾಕಿರಬಹುದು. ಆದರೆ ನಾನು ಈ ಹಾದಿಯಿಂದ ಬಂದದ್ದು ಅವರಿಗೆ

''ನೀವು ಈ ಅಂಗಡಿಯ ಬಾಗಿಲ ಮರೆಯಲ್ಲಿ ಅಡಗಿದ್ದಿರೇನು?"

''ಹೌದು. ಇಲ್ಲಿ ಅವಿತುಕೊಂಡು ಒಬ್ಬರ ಚಲನವಲನವನ್ನು ನಿರೀಕ್ಷಿಸುತ್ತಿದ್ದೆ." ಬ್ಲೇಕರಿಗೆ ಪಕ್ಕನೆ ನೆನಪಾಗಿ ಎದುರುಗಡೆ ನೋಡಿದರು. ಇಲಿನಳು ಕಾಣಲಿಲ್ಲ; ಇಷ್ಟರಲ್ಲಿ ಅದೃಶ್ಯಳಾಗಿದ್ದಳು.

''ಈ ಅಂಗಡಿ ನನ್ನವೇ, ಬರ್ರಿ. ನಿಮ್ಮ ಹಣೆಯೊಡೆದು ರಕ್ತ ಬರುತ್ತಿದೆಯಲ್ಲ!"

''ಅವರು ನನ್ನ ಕತ್ತಿಗೆ ಗುರಿಯಿಟ್ಟು ಚೂರಿ ಬೀಸಿದ್ದರು; ಅದರಿಂದ ಟೊಪ್ಪಿಗೆಯ ಅಂಚು ಹರಿದಿದೆ; ಆವಾಗಲೆ ಹಣೆಗೆ ಸ್ವಲ್ಪ ಚೂರಿ ತಾಗಿರಬೇಕು. ಗಾಯವೇನು ದೊಡ್ಡದಾಗಿಲ್ಲವೆಂದು ನನಗೆನಿಸುತ್ತದೆ.''

''ಆದರೂ ಆ ಗಾಯವನ್ನು ತೊಳೆಯಬೇಕೆನ್ನುತ್ತೇನೆ. ನಾನು ನಾವಲಿಗ, ಕೂದಲು ಕತ್ತರಿಸುವುದು ನನ್ನ ಉದ್ಯೋಗ. ಅಂಗಡಿಯ ಮುಂಭಾಗ

ದಲ್ಲಿಯೇ ನನ್ನ ಕಚೇರಿ ಕೋಣೆ. ನಿಮಗೆ ಸದ್ಯ ತೊಟ್ಟುಕೊಳ್ಳಲು ಒಂದು ಕೋಟು ಕೊಡುತ್ತೇನೆ."

ಬ್ಲೇಕರು ಯುವಕನ ಮುಖದ ಮೇಲೆ ಮರ್ಮಭೇದಿಯಾದ ದೃಷ್ಟಿಯನ್ನು ಬೀರಿದರು ಅವನು ಸರಲ ಪ್ರಕೃತಿಯ ಸಜ್ಜನನೆಂಬೇ ಅವರ ಭಾವನೆಯಾಯಿತು. ಅವನಿಗೆ ಕೃತಜ್ಞತೆ ಸಲ್ಲಿಸುತ್ತ ಅವರು ಅವನನ್ನು ಹಿಂಬಾಲಿಸಿದರು. ಅಂಗಡಿಯನ್ನು ಸಮೀಪಿಸಿದಾಗ ಮೇಲ್ಗಡೆಯ ಹಲಗೆ ಗೋಚರಿಸಿತು. 'ಸ್ಕಾರ್ಲೆಟ್-ಹೇರ್ ಕಟರ್' ಎಂದು ಅದರ ಮೇಲೆ ಬರೆದಿತ್ತು. ಬಾಗಿಲ ಹತ್ತಿರ ಅಂಗಡಿಯ ನಂಬರು ಬರೆದಿತ್ತು: ೪೫!

ಇಲಿನಳು ಕೊಟ್ಟ ಪದಕದ ಒಂದು ಬದಿಯಲ್ಲಿ ಇದ್ದುದೂ ಅದೇ ಅಂಕೆ!—ಬ್ಲೇಕ್ ಮನಸಿನಲ್ಲಿಯೇ ಅಂದುಕೊಂಡರು.

ನಾಪಿತನು ಬ್ಲೇಕರನ್ನು ಕರೆದೊಯ್ದ ಕೋಣೆ ಒಳ್ಳೆಯ ಸುಸಜ್ಜಿತವಾಗಿತ್ತು. ನಾವಲಿಗನ ಅಂಗಡಿಯಾಗಿದ್ದರೂ ಸುಖವಸ್ತು ಸದ್ಗೃಹಸ್ಥರ ಕುಳ್ಳಿರುವ ಕೋಣೆ ಎಂಬ ಕಲ್ಪನೆ ಬರುತ್ತಿತ್ತು. ನಾವಲಿಗನು ಅಲ್ಲಿಂದ ಹಿಂದಿನ ಕೋಣೆಗೆ ಕರೆದೊಯ್ದು ಗಾಯವನ್ನು ತೊಳೆಯುವ ಏರ್ಪಾಡಿನಲ್ಲಿ ತೊಡಗಿದ. ಬ್ಲೇಕರು ಕುರ್ಚಿಯಲ್ಲಿ ಕುಳಿತುಕೊಂಡು ಸ್ಕಾರ್ಲೇಟಿಯ ಆಕಸ್ಮಿಕ ಆವಿರ್ಭಾವವನ್ನೂ ಅವನ ಪರೋಪಕಾರ ಪೂರ್ಣ ವ್ಯವಹಾರವನ್ನೂ ಕುರಿತು ಯೋಚಿಸುತ್ತಿದ್ದರು. ತಾವಿಲ್ಲಿಗೆ ಬಂದೇನೆಂಬ ಕಲ್ಪನೆಯೇ ಅವರಿಗಿರಲಿಲ್ಲ. ಘಟನಾಚಕ್ರದೊಳಗೆ ಸಿಲುಕಿ ಅಲ್ಲಿಗೆ ಬಂದಿದ್ದರು. ಹೆಸರು ಪರದೇಶಿಯೆನಿಸಿದರೂ ಯುವಕನು ನೋಡುವುದಕ್ಕೆ ಆಂಗ್ಲನಂತಿದ್ದ. ಅವನು ದಕ್ಷತೆಯಿಂದ ಗಾಯವನ್ನು ತೊಳೆದು ಪಟ್ಟಿ ಕಟ್ಟಿದ. ಪಟ್ಟಿ ಕಟ್ಟುವ ಎಲ್ಲ ಸಾಮುಗ್ರಿಗಳನ್ನು ಅವನು ಮುಂಚೆಯೇ ಜೋಡಣೆ ಮಾಡಿಟ್ಟಿದ್ದ. ಕೊನೆಗೆ ಅವನು ಒಂದು ಜಾಕೀಟನ್ನು ಕೊಟ್ಟನು. ಅದನ್ನು ಧರಿಸುತ್ತ, ಬ್ಲೇಕ್:

"ಧನ್ಯವಾದ ಮಿ. ಸ್ಕಾರ್ಲೇಟಿ! ನಾನು—"

"ನನ್ನ ಹೆಸರು ಮರಿಸ್—ಟಾಮಸ್ ಮರಿಸ್. ಸ್ಕಾರ್ಲೇಟಿ ಈಗ ಇಲ್ಲಿಲ್ಲ." ಯುವಕನು ನಡುವೆಯೇ ಹೇಳಿದ.

"ಕ್ಷಮಿಸಿರಿ. ಇದೀಗ ಹಲಗೆಯಲ್ಲಿ ಈ ಹೆಸರನ್ನೇ ನೋಡಿದ್ದೆ."

"ಸ್ಕಾರ್ಲೇಟಿ ಈ ಅಂಗಡಿ ಬಿಟ್ಟು ಹೋಗಿ ಒಂದು ವಾರವಾಯಿತಷ್ಟೆ.

ನಾನಿದನ್ನು ಕೊಂಡ ಬಳಿಕ ಇನ್ನೂ ಹಲಗೆ ಬದಲಿಸುವುದು ಆಗಿಲ್ಲ: ಕೊಂಡು ಕೆಲವೇ ದಿನ ಆಗಿವೆ."

ಬ್ಲೇಕರಿಗೆ ವಿಸ್ಮಯವಾಯಿತು. "ಸ್ಕಾರ್ಲೆಟಿ ಅಂಗಡಿ ಬಿಟ್ಟು ಹೋದನೆ? ಏಕೆ ಹೋದನೆಂದು ಕೇಳಲಡ್ಡಿಯಿಲ್ಲವಷ್ಟೆ?"

"ಅದನ್ನು ನಿಮ್ಮೆದುರು ಹೇಳುವುದಕ್ಕೆ ಆತಂಕವಿಲ್ಲ. ಪೋಲಿಸರು ಅವನನ್ನು ಹಿಡಿದೆಳೆದಾಡಿದ್ದು ಮಾತ್ರ ಗೊತ್ತು ಯಾವುದೋ ವಿಧಿಬಾಹಿರ ಕಾರ್‍ಯಕ್ಕಾಗಿ; ಆದರ ಪೂರ್ಣ ಸಮಾಚಾರ ಗೊತ್ತಿಲ್ಲ. ೨೪ ಗಂಟೆಗಳಲ್ಲಿ ದೇಶತ್ಯಾಗ ಮಾಡಬೇಕೆಂದೂ ತಿರುಗಿ ಬರಲಾಗದೆಂದೂ ಅವನಿಗೆ ಪೋಲಿಸಿನವರ ಆಜ್ಞೆಯಾಗಿತ್ತೆಂದು ಕೇಳಿದ್ದೇನೆ. ಸುಸಜ್ಜಿತವಾದ ಅಂಗಡಿ-ಒಪ್ಪಿಸಿ ಮಾರಿಕೊಂಡು ಹೊರಡಬೇಕಾದ್ದರಿಂದ ಸಾಕಷ್ಟು ಗಿರಾಕಿ ಬಾರದೆ-ನನಗೆ ಸ್ವಲ್ಪ ಕಡಿಮೆ ಬೆಲೆಗೇ ಸಿಕ್ಕಿತು."

"ಹಾಂ. ೨೪ ಗಂಟೆಗಳಲ್ಲಿಯೆ ಮಾರುವುದೆಂದ ಬಳಿಕ ಹೆಚ್ಚಿನ ಬೆಲೆಯ ಆಶೆಯೇ ಇಲ್ಲ. ಸ್ಕಾರ್ಲೆಟಿ ಸ್ವೇಚ್ಛೆಯಿಂದಲೇ ಅಂಗಡಿ ಮಾರಿದನೆ?"

"ಹೌದು; ಸಂಪೂರ್ಣ ಸ್ವೇಚ್ಛೆಯಿಂದ. ಯಾರೂ ಒತ್ತಾಯ ಮಾಡಲಿಲ್ಲ ಅವನಿಗೆ-ಆದರಿದೇನು? ಅವಾಸ್ತವ ವಿಷಯಗಳನ್ನು ತಿಳಿಯಲು ನಿಮಗೇಕೆ ಇಷ್ಟೊಂದು ಆತುರ? ಇದು ಅನುಚಿತವಲ್ಲವೆ?"

"ನನ್ನ ಕುತೂಹಲ ಆಶಿಷ್ಟವೆಂದು ನಿಮಗೆನಿಸುವುದು ಸಹಜ ಆದರೆ ಮಿ. ಮರಿಸ್, ನಿಮ್ಮ ಶತ್ರುಗಳು ಯಾರೆಂಬುದನ್ನು ಅರಿತುಕೊಳ್ಳುವುದಕ್ಕಾಗಿಯೇ ಇದನ್ನೆಲ್ಲ ಕೇಳುತ್ತಿದ್ದೇನೆ."

ಮರಿಸ್ ಚಕಿತನಾದನು. "ನನಗೆ ಶತ್ರುಗಳಿದ್ದಾರೆಂದು ನಿಮ್ಮ ಭಾವನೆಯಾಗುವುದಕ್ಕೆ ಕಾರಣವೇನು?" ಎಂದು ಕೇಳಿದ

"ಕಾರಣವಿಲ್ಲದೇನು! ನಾನು ನಿಮ್ಮ ಬಾಗಿಲಲ್ಲಿ ಅಡಗಿದ್ದೆ. ನೋಡುವುದಕ್ಕೆ ನಾನು ನೀವು ಒಂದೇ ಹೋಲಿಕೆಯವರು. ನಾನು ಬಾಗಿಲ ಮನೆಯಿಂದ ಬೀದಿಗಿಳಿಯುತ್ತಲೆ ಪುಂಡರ ದಾಳಿಗೀಡಾದೆ. ಅವರು ಸನಿಯದಲ್ಲಿ ಅಡಗಿಕೊಂಡು ಕಾಯುತ್ತಿದ್ದರು; ಒಂದು ಕಾರೂ ಅಣಿಯಾಗಿತ್ತು; ಅದರ ಆರೋಹಿ ಸಶಸ್ತ್ರನಾಗಿದ್ದ; ನನಗೆ ಗುರಿಯಿಟ್ಟು ಅವನು ಗುಂಡುಹಾರಿಸಿದ. ನನ್ನಲ್ಲಿ ಹೆಚ್ಚು ಹಣವಿರಲಿಲ್ಲ, ನಾನು ಈ ಕಡೆ ಬರುವುದು ಅವರಿಗೆ ಗೊತ್ತೂ ಇರಲಿಲ್ಲ.

ಆದ್ದರಿಂದಲೇ ಅವರು ಕಣ್ಣಿಟ್ಟಿರುವುದು ನಿಮ್ಮ ಮೇಲೆಯೇ ಎಂದು ನನ್ನ ನಂಬಿಕೆ. ನಿಮ್ಮಂಗಡಿಯ ಬಾಗಿಲಿಂದ, ನಿಮ್ಮಂಥವನೇ ಒಬ್ಬ ಮನುಷ್ಯ ಹೊರಬಿದ್ದುದನ್ನು ಕಂಡು, ನನ್ನನ್ನೇ ನೀವೆಂದು ಭಾವಿಸಿ ಅವರು ಆಕ್ರಮಣ ಮಾಡಿದರು. ನಿಜವಾಗಿ ಅವರು ನಿಮ್ಮ ಶತ್ರುಗಳೇ, ಆದರೆ ಪೆಟ್ಟನ್ನು ಮಾತ್ರ ನಾನು ತಿನ್ನಬೇಕಾಯಿತು."

"ನಿಮ್ಮ ಮಾತುಗಳೇನೋ ಯುಕ್ತಿ ಸಂಗತವೇ; ಆದರೆ ಸತ್ಯವಲ್ಲ. ನನಗೆ ಶತ್ರು ಯಾರೂ ಇಲ್ಲ."

"ನೀವಿದನ್ನು ನಿರ್ಧಾರವಾಗಿ ಹೇಳಬಲ್ಲಿರಾ?" ದೃಢಸ್ವರದಿಂದ ಬ್ಲೇಕ್ ಕೇಳಿದರು.

ಮರಿಸ್ ಈಗ ಕೊಂಚ ಬೆದರಿಕೊಂಡ. ಕುಂಠಿತ ಸ್ವರದಲ್ಲಿ ಅವನೆಂದ—"ಆದರೆ ವಿಷಯವು ಅತ್ಯಂತ ಅದ್ಭುತವೆಂದು ಎನಿಸುತ್ತದೆ. ನಿಮ್ಮ ಮರುಸವಾಲಿಗೆ ಸಾವಧಾನವಾಗಿ ಉತ್ತರ ಕೊಡಬೇಕು! ನೀವು ಯಾರೋ ಗೊತ್ತಿಲ್ಲ. ಆದರೆ—"

ಯುವಕನ ಸ್ವರ ಕುಗ್ಗಿದುದನ್ನರಿತು ಬ್ಲೇಕರು ಮಾತನಾಡಿದರು: "ನನ್ನ ಪರಿಚಯ ಮಾಡಿಕೊಳ್ಳುವ ಆಗ್ರಹ ನಿಮಗಾಗಿದೆ. ನನ್ನ ಹೆಸರು ಬ್ಲೇಕ್, ರಾಬರ್ಟ್ ಬ್ಲೇಕ್. ಪತ್ತೇದಾರಿಕೆ ನನ್ನ ಉದ್ಯೋಗ. ಆದರೆ ಸರಕಾರೀ ಸಂಬಳದ ಪತ್ತೇದಾರ ನಾನಲ್ಲ ನೀವು ನನ್ನ ಹೆಸರು ಕೇಳಿರಲಿಕ್ಕೂ ಸಾಕು."

ಬಂದವರ ಹೆಸರು ಕೇಳಿ ಮರಿಸನಿಗೆ ಬರೀ ವಿಸ್ಮಯವಾಗಲಿಲ್ಲ, ಅವರ ವಿಷಯದಲ್ಲಿ ಶ್ರದ್ಧೆ ಸನ್ಮಾನಗಳಿಂದ ಅವನ ಹೃದಯ ಪರಿಪೂರ್ಣವಾಯಿತು. ವಿನಯ ಗೌರವಯುಕ್ತವಾಗಿ ಅವನೆಂದ: "ಸುವಿಖ್ಯಾತ ತುಬ್ಬುಗಾರರಾದ ಮಿ. ಬ್ಲೇಕ್ ನೀವೇಯೇ? ಈ ಲಂಡನಿನಲ್ಲಿ ನಿಮ್ಮ ಹೆಸರನ್ನು ಕೇಳದವರು ಯಾರು? ನಿಮ್ಮ ಅಸಾಮಾನ್ಯ ಶಕ್ತಿ-ಯುಕ್ತಿಗಳನ್ನು ಅರಿಯದವರಾದರೂ ಯಾರು? ನಿಮ್ಮನ್ನು ನೋಡಬೇಕೆಂಬ ಇಚ್ಛೆ ಎಷ್ಟೋ ದಿನಗಳಿಂದ ಇತ್ತು ನನಗೆ. ಆದರೆ ಯಾರಿಗೆ ಗೊತ್ತಿತ್ತು: ಹಠಾತ್ತಾಗಿ ಈ ರೀತಿ...."

ಬ್ಲೇಕರು ಅವನ ಮಾತಿನ ಪ್ರವಾಹವನ್ನು ತಡೆದರು. "ದೈವವಶಾತ್ ನಿಮ್ಮ ಭೆಟ್ಟಿಯಾಯಿತು. ನೀವು ಹಠಾತ್ತಾಗಿ ನನ್ನ ಬಳಿ ಬಂದು, :ಶತ್ರುಗಳ

ಆಕ್ರಮಣಕ್ಕಂಜದೆ ನನಗೆ ಸಹಾಯಮಾಡಲು ಇಷ್ಟೊಂದು ತವಕ ಪಟ್ಟಿರಿ. ಇದು ನಿಮ್ಮ ಸಾಹಸಕ್ಕೂ ಸಹೃದಯತೆಗೂ ಸಾಕ್ಷಿ; ಆದರೆ ನೀವೊಂದು ತಪ್ಪು ಮಾಡಿರುವಿರಿ;– ನಿಮಗೆ ಯಾವೂ ಹಗೆಗಳಿಲ್ಲವೆಂದು ನಿಶ್ಚಿಂತರಾಗಿರುವಿರಿ. ಈ ಪರಿಸ್ಥಿತಿಯಲ್ಲಿ ನಿಮ್ಮಂಥ ಸಹೃದಯ ಮಿತ್ರರಿಗೆ ಸ್ವಲ್ಪ ಸಹಾಯ ಮಾಡಬೇಕೆಂದು ನಾನು ಆತುರನಾಗಿದ್ದೇನೆ."

"ನೀವೆನ್ನುತ್ತೀರಿ–ನಾನು ತಪ್ಪು ಮಾಡಿದ್ದೇನೆಂದು. ಆದರೆ ನಾನಂತೂ ಅಂಥ ತಪ್ಪು—"

"—ತಮ್ಮ ತಪ್ಪು ತಮಗೆ ಕಾಣುವುದಿಲ್ಲ. ಆದರೆ ಸ್ವಲ್ಪ ನೆನಪುಮಾಡಿ ಕೊಂಡು ನೋಡಿರಿ, ನಿಮಗೆ ಯಾರಾದರೂ ಶತ್ರುಗಳಿದ್ದಾರೆಯೋ ಇಲ್ಲವೇ ಎಂದು; ಅವರೆಂದಾದರೂ ನಿಮ್ಮ ನಾಶಕ್ಕಾಗಿ ಪ್ರಯತ್ನಿಸಿರುವರೋ ಹೇಗೆಂದು."

"ಮಿ- ಬ್ಲೇಕ್" ಮರಿಸ್ ಕೊಂಚ ಯೋಚಿಸಿ ಮಾತನಾಡತೊಡಗಿದ: "ನೀವು ಹೇಳುತ್ತಿದ್ದೀರೆಂದು ದುರ್ಘಟನೆಯೊಂದು ನೆನಪಿಗೆ ಬರುತ್ತಿದೆ. ಅದು ಕೇವಲ ಆಕಸ್ಮಿಕವೆಂದು ಮೊದಲು ನನ್ನ ಭಾವನೆಯಾಗಿತ್ತು. ಅದನ್ನು ಹೇಳು ತ್ತೇನೆ ಕೇಳಿರಿ: ಆಗಲೇ ಹೇಳಿದೆನಲ್ಲ, ಈ ಅಂಗಡಿಯನ್ನು ನಾನು ಕೊಂಡು ಕೆಲವೇ ದಿನಗಳಾದವೆಂದು. ಎರಡು ದಿನಗಳ ಹಿಂದೆ ರಾತ್ರಿ ನಾನಿನ್ನೂ ಅಂಗಡಿ ಮುಚ್ಚಿಕೊಂಡು ಹೋಗಿರಲಿಲ್ಲ; ಒಂದು ಪತ್ತೇದಾರಿ ಕಾದಂಬರಿ ಓದುತ್ತ ಕುಳಿತಿದ್ದೆ. ಆ ಹೊತ್ತಿನಲ್ಲಿ ಜಂತಿಯೊಂದು ಮುರಿದು ನನ್ನ ಕುರ್ಚಿಯ ಬೆನ್ನಿಗೆ ತೀರ ಹತ್ತಿರದಲ್ಲಿಯೇ ಬಿದ್ದಿತು; ಒಂದೇ ಒಂದು ಅಂಗುಲದಲ್ಲಿ ನನ್ನ ತಲೆ ಉಳಿಯಿತು. ಲಡ್ಡಾಗಿ ಮುರಿದಿದ್ದೀತೆಂದು ನಾನು ತಿಳಿದುಕೊಂಡಿದ್ದೆ. ಮರುದಿನ ನೋಡಿದಾಗ ಆ ಜಂತಿಯನ್ನು ಯಾರೋ ಕೊರೆದಿಟ್ಟಂತೆ ಎನಿಸಿತು; ಅದಕ್ಕೆ ಕರಗಸದ ಕೊರೆತದ ಕುರುಹುಗಳಿದ್ದವು. ಆ ಮೇಲೆ ಮೊನ್ನೆ ಇನ್ನೊಂದು ಅಪಘಾತ ಸಂಭವಿಸಿತು. ರಾತ್ರಿಯ ಚೌಕಿದಾರನು ಮರಣ ಹೊಂದಿದ. ಮೇಸ್ತ್ರಿಗಳು ಮೇಲೆ ಕೆಲಸ ಮಾಡುವುದಕ್ಕಾಗಿ ಮಂಚಿಕೆ ಕಟ್ಟಿದ್ದರು. ಅದರ ಒಂದು ದೊಡ್ಡ ಹಲಗೆ ಕಳಚಿಕೊಂಡು ಅವನ ತಲೆಯ ಮೇಲೆ ಬಿದ್ದಿತ್ತು."

"ರಾತ್ರಿಯ ಚೌಕಿದಾರನೆ?" ಬ್ಲೇಕರು ಅಚ್ಚರಿಯಿಂದ ಹುಬ್ಬುಮುರಿದು

ಕೇಳಿದರು.

ಈ ತೆರನ ದುರ್ಘಟನೆಯನ್ನು ಇಲಿನ
ನೆನಪಾಯಿತು. ಆದ್ರೆ ಈ ಘಟನೆಯೋ ಎಂದು ಅವರಿಗೆ ಯೋಚನೆ ಬಂದಿತು.

ಅವರು ಮೌನವಾಗಿರುವುದನ್ನು ಕಂಡು ಮಾರಿಸ್ ಮುಂದುವರಿಸಿದ: "ಇದರೊಂದಿಗೆ ಇನ್ನೂ ಒಂದು ವಿಷಯ ಜ್ಞಾಪಕಕ್ಕೆ ಬರುತ್ತಿದೆ. ನಾನು ಈ ಅಂಗಡಿ ಕೊಂಡ ಮರುದಿನವೇ ಒಬ್ಬನು ಬಂದು, ತಾನಿದನ್ನು ಕೊಳ್ಳ ಬಯಸುತ್ತೇನೆಂದು ಹೇಳಿದ. ನಾನು ಒಪ್ಪಲಿಲ್ಲ. ಅವನಿಗೆ ಸಿಟ್ಟೇ ಬಂದಿತು. ನಾನು ಮೂರ್ಖನೆಂದೇ ತನ್ನ ಮಾತು ಕೇಳಲೊಲ್ಲೆನೆಂದೂ ಇದಕ್ಕಾಗಿ ಮುಂದೆ ನಾನು ಪಶ್ಚಾತ್ತಾಪಪಡಬೇಕಾಗುವುದೆಂದೂ ಏನೇನೋ ಅಂದ. ಭಾವ ಭಂಗಿ ಹೆದರಿಕೆ ಹಾಕುವಂತಹವೇ ಇತ್ತು. ನಾನದಕ್ಕೆ ಸೊಪ್ಪು ಹಾಕಲಿಲ್ಲ. ಈ ಅಂಗಡಿಯನ್ನು ಕೊಳ್ಳುವ ವಿಷಯದಲ್ಲಿ ಅವನಿಗಿದ್ದ ಆಗ್ರಹವನ್ನು ಕಂಡು ನನಗೆ ವಿಸ್ಮಯವಾಯಿತು. ನಾನು ಕೊಟ್ಟ ಬೆಲೆಯ ಐದು ಪಟ್ಟು ಬೆಲೆ ಕೊಡುವುದಕ್ಕೂ ಅವನು ಸಿದ್ಧನಿದ್ದ. ನಾನು ಕೊಳ್ಳುವ ಪೂರ್ವದಲ್ಲಿ ಒಂದು ವೇಳೆ ಅವನು ಸ್ಟಾರ್ಲೇ[illegible]ನ್ನು ಕಂಡಿದ್ದರೆ ನನಗಿದು ಸಿಕ್ಕುತ್ತಲೇ ಇರಲಿಲ್ಲ.

"ಐದು ಪಟ್ಟು ಹಣ ಕೊಡುವಂತಿದ್ದರೂ ಮಾರಲಿಲ್ಲವೆ? ಇನ್ನೂ ಹೆಚ್ಚು ಬೆಲೆ ಕೊಡುವವರು ಇದ್ದಾರೆಯೆ?"

"ಇಪ್ಪತ್ತು ಪಟ್ಟು ಹಣ ಬಂದರೂ ನಾನಿದನ್ನು ಮಾರುವುದಿಲ್ಲ," ಮಾರಿಸ್ ನಗುತ್ತ ಗೋಣುಹಾಕುತ್ತ ಹೇಳಿದ.

ಮಾರಿಸ್ ಚಟ್ಟನೆದ್ದು ಹೋಗಿ ಕಿಡಿಕಿಯ ತೆರೆಯನ್ನೆತ್ತಿ ಹೊರಕ್ಕೆ ನೋಡಿದ. ಆ ಕಡೆ ದೊಡ್ಡ ಖಾಲಿ ಬಯಲು. ಅಲ್ಲಿ ಮನೆಕಟ್ಟುವ ಸಾಮಗ್ರಿಗಳು—ಇಟ್ಟಿಗೆ, ಕಟ್ಟಿಗೆ, ಉಸುಕು ಮೊದಲಾದವು—ರಾಶಿ ರಾಶಿ ಬಿದ್ದಿದ್ದವು. ಕಂಟ್ರಾಕ್ಟದಾರನು ಅವನ್ನಲ್ಲಿ ಸಂಗ್ರಹಿಸಿದ್ದ. ಅದರಾಚೆ ಕೊಂಚ ದೂರದಲ್ಲಿ ಒಂದು ದೊಡ್ಡ ಅಟ್ಟಾಲಿಕೆಯ ಉಚ್ಚವಾದ ಪ್ರಾಕಾರ ಗೋಡೆ ಕಟ್ಟಡದ ಬಹುಭಾಗ ಕೆಡವಲಾಗಿತ್ತು. ಮಾರಿಸ್ ತಿರುಗಿ ಬಂದು ಬ್ಲೇಕರಿಗೆ ಹೇಳಿದ—

ನಾನು ಅಲ್ಲಿ ಏನು ನೋಡಿದೆ ಗೊತ್ತೆ? ಆಕಡೆಗಿರುವುದು ಕಸ್ಮೋಪೊಲಿಸ್ ಹೋಟೆಲು. ಆ ಹೋಟೆಲನ್ನು ಕೆಡವಿ ಒಂದು ದೊಡ್ಡ ಹೊಸ ಮನೆ

ಯನ್ನು ಕಟ್ಟುತ್ತಿದ್ದಾರೆ. ಕೆಲವು ತಿಂಗಳಲ್ಲಿಯೇ ಅದು ಪೂರ್ಣವಾಗುವುದು. ಆ ಹೊಸ ಕಾರ್ಯಾಲಯದಲ್ಲಿ ನೂರಾರು ಗಂಡುಸರು ಹೆಂಗುಸರು ಕೆಲಸ ಮಾಡುವರು. ಇದಿರಿಗೆ ನನ್ನ ಅಂಗಡಿ ಇರುತ್ತಿರಲಿಕ್ಕೆ, ಕೂದಲು ಕತ್ತರಿಸಿ ಕೊಳ್ಳಲಿಕ್ಕೆ ಗಡ್ಡಮಾಡಿಸಿಕೊಳ್ಳಲಿಕ್ಕೆ ಅವರು ಮತ್ತೆಲ್ಲಿಗೆ ಹೋಗುವರು? ಒಂದೆರಡು ವರ್ಷಗಳಲ್ಲಿಯೇ ನನ್ನ ಈ ಚಿಕ್ಕ ಅಂಗಡಿ ಚಿನ್ನದ ಕಣಿಯಾಗು ವುದು. ನಾನಿಲ್ಲಿ ಕೂತಲ್ಲಿಯೇ ನೂರಾರು ರೂಪಾಯಿ ಸಹಜ ಗಳಿಸುತ್ತೇನೆ. ಈ ಭವಿಷ್ಯತ್ತಿನ ಸುಖಸ್ವಪ್ನವನ್ನು ಕಂಡೇ ನಾನಿದನ್ನು ಕೊಂಡದ್ದು. ಸ್ಕಾರ್ಲೇ ಟಿ ಇನ್ನೂ ಹೆಚ್ಚು ಬೆಲೆ ಬೇಡಿದ್ದರೂ ನಾನು ಕೊಳ್ಳದೆ ಬಿಡುತ್ತಿರಲಿಲ್ಲ."

"ಸ್ಕಾರ್ಲೇಟಿಯ ಸುದ್ದಿ ನಿಮಗೆ ಹೇಗೆ ತಿಳಿಯಿತು?" ಬ್ಲೇಕ್ ಕ್ಷಣ ಹೊತ್ತು ಏನೋ ವಿಚಾರಮಾಡಿ ಕೇಳಿದರು.

ಆಗ ಮುದಿಸನ ಮೊಗ ಲಜ್ಜೆಯಿಂದ ಕೆಂಪೇರಿತು. ಅವನು ಹೇಳಿದ: "ಇಲ್ಲಿ ಅವನ ಕಾರ್ಯಭಾರವನ್ನೆಲ್ಲ ವಹಿಸಿದ್ದ ಯುವತಿಯೇ ಹೇಳಿದಳು. ನಾನವಳನ್ನು ಮದುವೆಯಾಗುವ ಯೋಗವಿದೆಯೋ ಇಲ್ಲವೊ, ಏನು ಪಾಪ್ಪಾ ಶ್ಚರ್ಯವೇ ಕೊನೆಯೋ! ಮಾರ್ಜಾಲಿನಿ ಬುದ್ಧಿಮತಿಯಿದ್ದಂತೆಯೇ ಕೆಲಸ ಬೊಗಸೆಗಳಲ್ಲಿ ಆವಳ ದಕ್ಷತೆಯೂ ಅಸಾಧಾರಣವೇ. ಅವಳು ಗುಟ್ಟಾಗಿ ಎಲ್ಲವನ್ನೂ ಹೇಳಿದಳು ಸ್ಕಾರ್ಲೇಟಿಯು ಅಡಳಿತಗಾರ ಟುರಿನ್ನೋ ರಜೆಯ ಮೇಲೆ ಹೋಗಿದ್ದುದರಿಂದ ಅಂಗಡಿಯು ಆಡಳಿತವೆಲ್ಲ ಇವಳ ಕೈಯಲ್ಲಿತ್ತು."

"ಸಾರ್ಲೇಟಿ ಅಂಗಡಿ ಬಿಟ್ಟು ಹೋಗುವ ವಿಷಯ ಟುರಿನ್ನೋಗೆ ಗೊತ್ತಿ ರಲಿಲ್ಲವೆ?"

"ಇಲ್ಲ. ಅವನ್ನು ಹೋದ ಮೇಲೆ ಬರುವುದರೊಳಗಾಗಿಯೇ ಎಲ್ಲ ನಡೆದದ್ದು. ರಜೆ ತೀರಿಸಿಕೊಂಡು ಅವನು ಬರುವಷ್ಟರಲ್ಲಿ ನಾನು ಅಂಗಡಿಯ ಒಡೆಯನಾಗಿದ್ದುದನ್ನು ಕಂಡು ಅವನ ಕಣ್ಣುಗಳೆರಡೂ ಹಣೆಗೇರಿದವು."

"ತಿಳಿಯಿತು. ಆದರೆ ಐದು ಪಟ್ಟು ಬೆಲೆ ಕೊಟ್ಟು ಕೊಳ್ಳಲು ಬಂದಿದ್ದ ನಲ್ಲ, ಅವನ ಹೆಸರೇನು?"

"ಅವನು ವಿದೇಶಿ. ಎಲ್ಲಿಯವನೆಂಬುದು ಗೊತ್ತಿಲ್ಲ. ಅವನು ಹೇಳಿದ ಹೆಸರು ಜೇನಿಂಗ್ಸೋ ಜೋನಾರೋ ಹೀಗೆನೋ ಇತ್ತು, ಸರಿಯಾಗಿ ನೆನ ಪಿಲ್ಲ. ನಿತ್ಯ ಎಷ್ಟೋ ಜನರ ಹೆಸರು ಕೇಳುತ್ತೇನೆ, ಎಲ್ಲವೂ ನೆನಪಿರುತ್ತ

ವೆಯಿ? ಆಮೇಲೆ ಅವನನ್ನು ನೋಡಿಲ್ಲ, ಅವನ ಸುದ್ದಿಯೂ ಇಲ್ಲ"

"ಆಳು ಹೇಗೆ? ಬಲು ಉದ್ದನೇ? ನಾಲ್ಕು ಮೊಳ ಎತ್ತರದ ಪ್ರಾಣಿಯೆ? ತಲೆಯ ಮೇಲೆ ದೊಡ್ಡ ಜಬರಿ ಟೋಪಿಗೆ ಇತ್ತೆ?"

ಮರಿಸ್ ವಿಸ್ಮಯದಿಂದ ನುಡಿದ: "ನೀವೂ ಅವನನ್ನು ನೋಡಿದ್ದೀರಿ ಹಾಗಾದರೆ! ಹೌಂ, ಅದೇ ಮನುಷ್ಯ ಅವನ ಕುತ್ತಿಗೆ ಶಿರಗಳು ಚಿಟುಕಿದಂತೆ ದಪ್ಪ, ಅವುಗಳನ್ನು ಹತ್ತಿಕ್ಕುವುದು ಕಾಲರಿಗೆ ಸಾಧ್ಯವಿಲ್ಲ."

"ಹೌದು ಹೌದು, ನಾನು ಅವನನ್ನು ಮೊದಲ ಸಲ ನೋಡಿದ್ದು ಇಂದು ರಾತ್ರಿಯೇ, ಇದೀಗ ಮೋಟಾರಿನೊಳಗಿಂದ ಗುಂಡುಹಾರಿಸಲಿಲ್ಲವೇ— ಅದರಲ್ಲಿ ಇದೇ ಮೂರ್ತಿ ಇದ್ದ ಹಾಗಿತ್ತು"

"ಮೊದಲು ಅವನನ್ನು ಎಲ್ಲಿ ಯಾವ ಪರಿಸ್ಥಿತಿಯಲ್ಲಿ ಕಂಡಿದ್ದಿರಿ?" ಮರಿಸ್ ಕುತೂಹಲದಿಂದ ಕೇಳಿದ.

ಆ ಸಂಗತಿಯನ್ನು ಗೌಪ್ಯವಾಗಿಡುವುದು ಅವಶ್ಯವೆಂದು ಬ್ಲೇಕರಿಗೆ ಎನಿಸಲಿಲ್ಲ; ಸಂಕ್ಷೇಪವಾಗಿ ಮರಿಸನಿಗೆ ತಿಳಿಸಿದರು.

"ಇಲ್ಲಿ ನೋಡಿ ಮಿ. ಬ್ಲೇಕ್, ನನ್ನಂಥ ಸಾಮಾನ್ಯ ನಾವಲಿಗನ ಹೊಟ್ಟೆಯ ಮೇಲೆ ಹೊಡೆಯುವುದಕ್ಕೆ ಯಾರಿಗೇಕೆ ತಲೆನೋವು? ನಿಮ್ಮ ಮಾತಿನಲ್ಲಿ ಹುದುಗಿಟ್ಟಿತೆಂಬುದು ನನಗೆ ತೋರಲೊಲ್ಲದು. ಆದರೂ ನೀವು ಹೆಸರಾದ ತುಬ್ಬುಗಾರರು. ನಾನು ಮುಕ್ತ್ರಿನ್ ನಾವಿಕ."

"ಹೌದು, ಸ್ಥೂಲಬುದ್ಧಿಗೆ ನಿಮ್ಮ ಮಾತು ಸರಿಯೆಂದೇ ತೋರುತ್ತದೆ. ಒಬ್ಬ ನಾವಲಿಗನ ಉದ್ಯೋಗ ಮುಗಿಸುವುದಕ್ಕಾಗಿ ರಾತ್ರಿ ರಾಜಬೀದಿಯಲ್ಲಿ ಹೊಂಚು ಹಾಕಿ ಎರಗುವುದು, ಹಾದಿಹಿಡಿದು ಹೋಗುವವನ ಮೇಲೆ ಗುಂಡುಹಾರಿಸುವುದು, ಕೊರಳಿಗೆ ಚೂರಿಯಿಕ್ಕುವುದು—ಇವೆಲ್ಲ ಬಹಳ ಹೆಚ್ಚಿನದೆಂದೇ ಎನಿಸುತ್ತದೆ. ಅಧಿಕಾಂಶ ಜನರು ನಿಮ್ಮಂತೆಯೇ ಬಗೆಯುತ್ತಾರೆ. ಸದ್ಯ, ನಿಮ್ಮಂಥ ಜನ, ಅವರೆಷ್ಟೇ ಧೂರ್ತರಿರಲಿ, ಈ ಕ್ಷುದ್ರ ಅಂಗಡಿಯನ್ನು ವಶಪಡಿಸಿಕೊಳ್ಳುವ ಹೊರತು ಬೇರೆ ಏನೋ ಪ್ರಕರಣ ಇದ್ದಿರಬಹುದೆಂದು ಭಾವಿಸಲಾರರು. ಆದರೆ ಆ ಪ್ರಕರಣ ಅತ್ಯಂತ ವಿರಾಟ್ ಸ್ವರೂಪದ್ದು, ಅದರೊಡನೆ ನಿಮ್ಮ ಯಾವುದೇ ಸಂಬಂಧವಿದ್ದಿದ್ದರೆ, ನಿಮ್ಮ ಬಾಳು ಯಾವ ಕ್ಷಣದಲ್ಲೂ ಸುರಕ್ಷಿತವಿರಲಾರದೆಂದು ನನ್ನ ತಿಳಿವಳಿಕೆ."

ಬ್ಲೇಕರ ಗಂಭೀರ ಭಾವವನ್ನೂ ಅತಿ ಕಾತರತೆಯನ್ನೂ ಕಂಡು ಮರಿಸನ ಮುಖ ಒಣಗಿತ್ತು; ಎದೆಯೊಳಗೆ ಢಕಢಕ ಎನ್ನತೊಡಗಿತು: ಆದರೆ ಅವನು ಮನಸನ್ನು ಸಂಯಮಿಸಿಕೊಂಡು, ಮೊಗದ ಮೇಲೆ ಪ್ರಯತ್ನಪೂರ್ವಕವಾಗಿ ನಗೆಯನ್ನು ತಂದುಕೊಂಡು ಮಾತನಾಡಿದ: "ನಿಮ್ಮಂಥ ಪತ್ತೇದಾರರ ವಿಚಾರವೇ ಹೀಗೆ! ನೆಲದ ಮೇಲಿನ ಕೆಂಪು ಮಸಿಯ ಕಲೆಯನ್ನು ಕಂಡರೆ ಕೊಲೆಯಾಗಿದೆಯೆಂದೇ ಶೋಧಿಸಹತ್ತುತ್ತೀರಿ ನೀವು!"

"ಆದರೆ ನಿಮ್ಮ ತಲೆಯ ಹತ್ತಿರ ಜಂತಿ ಮುರಿದು ಬಿದ್ದಂದಿನಿಂದ ಈ ವರೆಗೆ ನಡೆದ ದುರ್ಘಟನೆಗಳನ್ನೆಲ್ಲ ನೆನಸಿಡಿರಿ."

"ಹಾಂ. ಭಯಂಕರವೇ. ಪೋಲಿಸರಿಗೆ ತಿಳಿಸಬೇಕೆ?"

"ಆದರೆ ನೀವು ಏನೆಂದು ವಾದಿಸುವಿರಿ? ಯಾರ ಬಗ್ಗೆ ಯಾವ ಪ್ರಮಾಣ ತೋರಿಸುವಿರಿ? ಸಂದೇಹವೇ ನಿಮ್ಮ ಬಂಡವಾಳ ತಾನೆ? ಅದರಿಂದೇನೂ ಫಲವಿಲ್ಲ. ಆದರೆ ನನ್ನ ಮೇಲೆ ಭಾರಹಾಕಬಹುದು ನೀವು. ನಾನು ನಿಮ್ಮನ್ನು ಸುರಕ್ಷಿತವಾಗಿ ಇಡಬಲ್ಲೆ. ನೀವು ಮಾತ್ರ ಯಾರ ಬಗ್ಗೆಯೂ ಸಂದೇಹವಿಲ್ಲದವರಂತೆ ವರ್ತಿಸಬೇಕು; ನಿಶ್ಚಿಂತ ಮನಸಿನಿಂದ ಕೆಲಸ ಕಾರ್ಯ ಸಾಗಿಸಬೇಕು. ಶತ್ರುಗಳ ವಿರುದ್ಧವಾಗಿ ಯಾವುದೊಂದು ಪ್ರಮಾಣ ದೊರಕುವ ಮೊದಲು, ಅವರ ಮನಸಿನಲ್ಲಿ ಶಂಕೆ ಹುಟ್ಟುವುದಾಗಲಿ, ಅವರು ಭಯಗೊಂಡು ಜಾರಿಕೊಳ್ಳುವುದಾಗಲಿ ಇಷ್ಟವಲ್ಲ."

"ಒಳ್ಳೇದು, ಹಾಗೇ ಆಗಲಿ. ನಾನು ನಿಮ್ಮಲ್ಲಿ ಭರವಸ ಉಳ್ಳವನಾಗಿದ್ದೇನೆ." ಕ್ಷಣಹೊತ್ತು ಯೋಚಿಸಿ ಮರಿಸ್ ಹೇಳಿದ.

"ಸರಿ." ಎಂದು ನುಡಿದು ಬ್ಲೇಕರು ಹಿತ್ತಾಳೆಯ ಪದಕವನ್ನು ಮರಿಸನಿಗೆ ತೋರಿಸುತ್ತ, "ಈ ಮೊದಲು ಇಂಥ ವಸ್ತುವನ್ನು ನೋಡಿದ್ದೀರಾ?" ಎಂದು ಕೇಳಿದರು.

"ಇಲ್ಲ!" ವಿಸ್ಮಯದಿಂದ ಉತ್ತರವಿತ್ತ ಮರಿಸ್. "ಇಂಥದನ್ನು ಈ ಮೊದಲು ನೋಡಿಯೇ ಇಲ್ಲ. ಏನಿದು? ಇದರ ಮೇಲೆ ೪೫ ಬರೆದಿದೆ— ಇದು ನನ್ನ ಅಂಗಡಿಯ ನಂಬರು! ಆದರೆ ಇದರ ಇನ್ನೊಂದು ಮಗ್ಗುಲಲ್ಲಿ ೨೬ ಇದೆ. ಈ ಅಂಕೆಯ ಬಗ್ಗೆ ಏನಾದರೂ ಅರಿತುಕೊಂಡಿರುವಿರಾ?"

"ಈ ಗುಟ್ಟನ್ನು ರಟ್ಟು ಮಾಡುವ ಕೆಲಸ ನಿಮಗೇ ಒಪ್ಪಿಸಬೇಕೆನ್ನು

ತ್ತೇನೆ. ಇದು ಗುಪ್ತ ರಹಸ್ಯದ ಒಂದು ಎಳೆ ಮಾತ್ರ. ಇದರಲ್ಲಿ ನನಗೆ ಎಳ್ಳಷ್ಟೂ ಸಂದೇಹವಿಲ್ಲ. ಮತ್ತು—’’

ಬ್ಲೇಕರ ಮಾತು ಮುಗಿಯಲಿಲ್ಲ. ಮೊಗವೆತ್ತಿ ಅವರು ಕಿಡಿಕಿಯತ್ತ ನೋಡಿದರು. ಅದರ ತೆರೆಯ ಮೇಲೆ ಒಂದು ಮುಖ ಮೂಡಿತ್ತು. ಅತ್ಯಂತ ವಿಕರಾಳ ಮುಖ, ಅದರ ಭಂಗಿ ಅತ್ಯಂತ ಭೀಷಣ! ಆ ನೆರಳಿನಂತಹ ಮೂರ್ತಿಯ ಟೊಪ್ಪಿಗೆ ಕಣ್ಣುಮರೆಯಾಗುವಷ್ಟು ಹಣೆಯ ಮೇಲೆ ಇಳಿದಿತ್ತು.

ಬ್ಲೇಕ್ ಮರಿಸನನ್ನು ಬದಿಗೊತ್ತಿ, ಒಂದು ನೆಗೆತದಲ್ಲಿ ಕಿಟಕಿಯ ಹಿಂಬದಿಯ ಅಂಗಳಕ್ಕಿಳಿದು ಒಂದು ಕಬ್ಬಿಣ ಕಂಬಿಯನ್ನು ತೆಗೆದುಕೊಂಡು ಆ ಛಾಯಾ ಮೂರ್ತಿಯ ಕಡೆ ಧಾವಿಸಿದರು. ಆದರೆ ಅಷ್ಟರಲ್ಲಿ ಆ ವ್ಯಕ್ತಿ ಮಾಯವಾಗಿತ್ತು. ಆ ಸಾಮಾನುಗಳ ರಾಶಿಯಲ್ಲಿ ಅವನನ್ನು ಹುಡುಕುತ್ತ ಕತ್ತಲೆಯಲ್ಲಿ ಅಲೆಯುವುದು ವ್ಯರ್ಥವೆಂದು ಬಗೆದು ಅವರು ಕಿಟಕಿಯ ಮೂಲಕ ತಿರುಗಿ ಒಳಗೆ ಬಂದರು.

“ನಾನು ಹೇಳಿದ್ದು ನಿಜ, ಗೊತ್ತಾಯಿತಲ್ಲವೆ?” ಎಂದು ನುಡಿದು ಬ್ಲೇಕ್ ಪದಕವನ್ನು ಮರಿಸನ ಮುಂದೆ ಹಿಡಿದು “ಇದೇ ಎಲ್ಲ ರಹಸ್ಯಗಳ ಸೂತ್ರ” ಎಂದರು.

೩

ಇಟಲಿಯ ಜಿನೋಆ ನಗರದಲ್ಲಿ ಸಿಜಾರೆ ಜೇನಾ ಹುಟ್ಟಿದ್ದು. ಆ ನಗರದ ಒಂದು ಕಾಡು ಬಡಗ್ರಾಮ ಭಾಗದ, ಅಂಧಕಾರಾಚ್ಛನ್ನ ಮದ್ಯದಂಗಡಿಯ ಹಿಂದಿದ್ದ ಕೋಣೆಯಲ್ಲಿ ಅವನು ಭೂಮಿಗೆ ಅವತರಿಸಿದ್ದು. ಆ ಅಂಗಡಿಯ ಇದಿರಿನ ಓಣಿ ಬಂಡಿ ಹಾಯುವಷ್ಟು ಕಿರಿದು. ಅಲ್ಲಿ ಬೆಳಕನ್ನು ಕೆಡಹುವುದು ಸೂರ್ಯನಿಗೂ ಅಸಾಧ್ಯವಾಗಿತ್ತು. ಸಿಜಾರೆಯ ತಂದೆ ಯಾರೋ ಗೊತ್ತಿಲ್ಲ. ಶೈಶವದಲ್ಲಿ ಅವನು ಜೋಪಾನವಾದದ್ದು ಹೇಗೋ ಜನ ಅರಿಯರು. ಭಗವಂತನೇ ಯಾರ ರಕ್ಷಣೆಯ ಭಾರವನ್ನು ಹೊತ್ತಿರುವನೋ ಅವನು ಎಂತಹ ಕಷ್ಟದಲ್ಲಿಯೂ ಬದುಕಿ ಬೆಳೆಯುವನು; ಅನಾಥನಾಗಿ, ಸಮಾಜದಿಂದ ಬಹಿಷ್ಕೃತನಾಗಿದ್ದರೂ ಅವನು ಗೆಲ್ಲುವನು. ಅಂತಹ ದೈವಶಾಲಿ ವ್ಯಕ್ತಿ

ಸಿಜಾರೆ ಆದರೆ ಯೌವನದ ಮೊದಲ ದಿನಗಳಲ್ಲಿಯೇ ಅವನು ದೇವನನ್ನು ಪರಿತ್ಯಜಿಸಿ ದೆವ್ವನನ್ನು ಆಶ್ರಯಿಸಿದ.

ಚಿಕ್ಕಂದಿನಲ್ಲಿಯೇ ಸಿಜಾರೆ ತನ್ನ ಶಾರೀರಿಕ ಮಾನಸಿಕ ಸಾಮರ್ಥ್ಯವನ್ನು ತೋರ್ಪಡಿಸಿದ. ಓಣಿಯ ಹುಡುಗರಲ್ಲಾಗುತ್ತಿದ್ದ ಜಗಳಗಳಲ್ಲಿ, ಕೃತ್ರಿಮ ಯುದ್ಧಗಳಲ್ಲಿ ಅವನೇ ದಳಪತಿ. ತಂಡ ಕಟ್ಟಿಕೊಂಡು ಕಂಡವರ ತೋಟದಲ್ಲಿ ನುಗ್ಗಿ ಹಣ್ಣು ಕಾಯಿ ಕದಿಯುವುದು;–ಹಸ್ಸೆರಡಾಸೆ ಪಾಲು ತನಗೆ, ಮಿಕ್ಕದ್ದು ಅನುಯಾಯಿಗಳಿಗೆ. ಇದಕ್ಕೆ ಯಾರಾದರೂ ಪ್ರತಿ ಆಡಿದರೆ ಅವರಿಗೆ ಶಿಕ್ಷೆಯಾಗುತ್ತಿತ್ತು. ಸಿಜಾರೆಯ ಶತ್ರುವನ್ನು ಅವನ ಕೈಯಿಂದ ಉಳಿಸಿಕೊಳ್ಳುವುದು ಯಾರಿಗೂ ಸಾಧ್ಯವಿರಲಿಲ್ಲ.

ಯೌವನದಲ್ಲಿ ಅವನು ಅಸಾಧಾರಣ ಬಲಶಾಲಿ. ಅವನ ಮೈ ಸ್ಥೂಲವಾಗುವ ಮುಂಚೆ ವ್ಯಾಯಾಮದಲ್ಲಿ ಅದ್ಭುತ ಕುಶಲತೆಯನ್ನು ತೋರುತ್ತಿದ್ದ. ಶಾರೀರಿಕ ಸಾಮರ್ಥ್ಯವನ್ನೂ ಕ್ರೀಡಾಕೌಶಲವನ್ನೂ ಪ್ರದರ್ಶಿಸಿ ಅನೇಕ ಧನಾಢ್ಯ ಪ್ರವಾಸಿಕರಿಂದ ಪ್ರಚುರ ಪುರಸ್ಕಾರವನ್ನು ಪಡೆಯುತ್ತಿದ್ದ. ಹಡಗಿನಿಂದ ಸಮುದ್ರದಲ್ಲಿ ಜಿಗಿದು, ಪ್ರಯಾಣಿಕರ ಬಿದ್ದ ಹಣಕಾಸುಗಳನ್ನು ತರುತ್ತಿದ್ದ. ಇಪ್ಪತ್ತು ವರುಷದವನಾಗುವ ಪೂರ್ವದಲ್ಲಿಯೇ ಗುಂಪಿನ ಒಡೆಯನಾಗಿ ಅಲ್ಪ ವಯಸ್ಕರಾದ ಕಿರ ಕಳ ಕಳ್ಳರಿಂದ ಚೌಥಾಯಿ ಎತ್ತುತ್ತಿದ್ದ. ಯಾರಾದರೂ ಅವನ ಅಪ್ಪಣೆಯನ್ನು ಅಲ್ಲಗಳೆದರೆ ಅವನ ಅನುಚರರು ಅವರ ತಲೆಯನ್ನೇ ಒಡೆಯುತ್ತಿದ್ದರು.

ಕೆಲ ದಿನಗಳ ತರುವಾಯ ಬಂದರದ ಹತ್ತಿರ ಒಂದು ಸ್ಥಳವನ್ನು ಹಿಡಿದು, ನಾನಾ ಪ್ರಕಾರದ ವ್ಯಾಯಾಮಗಳನ್ನು ಪ್ರದರ್ಶಿಸುತ್ತಿದ್ದ. ಆದರೆ ಈ ಉದ್ಯೋಗದಲ್ಲಿ ಅವನ ಮನಸು ತಣಿಯಲಿಲ್ಲ ತುಸು ದಿನಗಳಲ್ಲಿ ಅದನ್ನು ಬಿಟ್ಟು ಒಂದು ಸರ್ಕಸ್ ಕಂಪನಿಯನ್ನು ಸೇರಿದ. ಆ ಕಂಪನಿ ಯುರೋಪಿನ ಎಲ್ಲ ದೇಶಗಳನ್ನು ಸುತ್ತುತ್ತಿತ್ತು, ಮುಂದೆ ಕಂಪನಿಯಲ್ಲಿದ್ದರೆ ತನ್ನ ಪ್ರತಿಭೆ ವಿಕಾಸಹೊಂದಲಾರದೆಂದು ಬಗೆದು ಸಿಜಾರೆ ಅದನ್ನು ತ್ಯಜಿಸಿದ ಪುನಃ ಕಳ್ಳರ–ಕಾಕರ ಬಳಗ ಕಟ್ಟಿಕೊಂಡು ಮೊದಲಿನ ಚೌರ್ಯವ್ಯವಸಾಯವನ್ನೇ ಕೈಕೊಂಡ.

ಆದರೆ ಆ ವ್ಯವಸಾಯದಲ್ಲಿ ಪೋಲಿಸರ ಕಣ್ಣು ತಪ್ಪಿಸಿರುವದು ಹೆಚ್ಚು

ಕಾಲ ಸಾಧ್ಯವಾಗಲಿಲ್ಲ. ಅವರ ಆಕ್ರಮಣವನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಸಿಜಾರಿ ಅಮೇರಿಕೆಗೆ ಓಡಬೇಕಾಯಿತು. ಅಲ್ಲಿನ ಸಿಕ್ಯಾಗೋ ನಗರ ಚೋರ ತಸ್ಕರರ ಲೀಲಾ ಕ್ಷೇತ್ರ. ಅಲ್ಲಿ ಅವನಿಗಾಗಿ ಕಾರ್ಯಕ್ಷೇತ್ರ ತೆರೆದೇ ಇತ್ತು. ಅಲ್ಲಿ ಅವನು ತನ್ನ ಇಟಾಲಿಯನ್ ಚಾತುರ್ಯಗಳೊಡನೆ ಕಳವಿನ ಹಲವು ನೂತನ ಹಂಚಿಕೆಗಳನ್ನು ಕಲಿತುಕೊಂಡ.

ಆದರೆ ಸಿಕ್ಯಾಗೋದಲ್ಲಿ ಯಾವ ಕಳ್ಳರ ತಂಡದ ನಾಯಕತ್ವವೂ ಅವನಿಗೆ ಲಭ್ಯವಾಗಲಿಲ್ಲ. ಬೇರೊಬ್ಬ ನಾಯಕನ ನೇತೃತ್ವದಲ್ಲಿ ಕಳ್ಳತನ ನಡೆಸುವುದು, ತನ್ನ ಗಳಿಕೆಯಲ್ಲಿ ಅವನಿಗೆ ಪಾಲು ಕೊಡುವುದು, ಅವನ ಅಪ್ಪಣೆಗಳನ್ನು ಪಾಲಿಸಿಕೊಂಡಿರುವುದು, ಸಿಜಾರಿಗೆ ಅಪಮಾನಕರವೆನಿಸಿತು. ಅವನ ವಿಶಾಲ ದೇಹ ಎಲ್ಲರ ಲಕ್ಷ್ಯವನ್ನೂ ಸೆಳೆದಿತ್ತು. ಆದುದರಿಂದ ಅವನನ್ನು ಗುರುತಿಸುವುದು ಸುಲಭಸಾಧ್ಯವಿತ್ತು. ಒಂದೆರಡು ಬಾರಿ ಅವನು ವಿಪತ್ತಿನಲ್ಲಿ ಬಿದ್ದೂ ಇದ್ದ. ಆದರೆ ಹೇಗೋ ಪಲಾಯನಮಾಡಿ ಪೋಲೀಸರ ಕೈಯಿಂದ ಉಳಿದುಕೊಂಡ

ಆಮೇಲೆ ಅವನು ಅಮೇರಿಕೆಯನ್ನು ಬಿಟ್ಟು ಲಂಡನ್ನಿಗೆ ಬಂದ. ಅಲ್ಲಿನ ಪರಿಸ್ಥಿತಿ ತನ್ನ ಮಹತ್ವಾಕಾಂಕ್ಷೆಗೆ ಅನುಕೂಲವಾಗಿರುವುದೆಂದು ಅವನಿಗೆನಿಸಿತು. ಲಂಡನಿನ ಪಶ್ಚಿಮ ಉತ್ತರದಲ್ಲಿ ಒಂದು ಮನೆಯನ್ನು ಹಿಡಿದು ವಾಸ ಮಾಡಿದ. ಆ ಭಾಗದ ಚೋರ ತಸ್ಕರರ ಸ್ನೇಹವನ್ನು ಬೆಳೆಸಿದ. ಅನೇಕ ವಿಖ್ಯಾತ ತಸ್ಕರರು ಅವನ ಪ್ರಭಾವಕ್ಕೆ ಒಳಗಾಗಿ ಅವನ ನೇತೃತ್ವವನ್ನು ಅಂಗೀಕರಿಸಿದರು. ಕೆಲ ಪ್ರಸಿದ್ಧ ಚೋರ ದಳಪತಿಗಳು ಮಾತ್ರ ಈ ವಿದೇಶೀ ಚೋರರನ್ನು ತಮ್ಮ ಕಾರ್ಯಕ್ಷೇತ್ರದಿಂದ ಅಟ್ಟಲು ಪ್ರಯತ್ನಿಸಿದರು. ತತ್ಪರಿಣಾಮವಾಗಿ ಅವರ ಗುಂಪುಗಳೊಡನೆ ಜಗಳ ತಂಟೆಗಳು ಹುಟ್ಟಿಕೊಂಡವು. ರಾಜ ರಾಜರಲ್ಲಿ ನಡೆಯುವ ಯುದ್ಧಕ್ಕೂ ಚೋರ ದಳಪತಿಗಳಲ್ಲಿ ನಡೆಯುವ ಯುದ್ಧಕ್ಕೂ ವಿಶೇಷ ವ್ಯತ್ಯಾಸವಿರುವುದಿಲ್ಲ ಗೆದ್ದ ರಾಜನು ಸೋತ ರಾಜನನ್ನು ರಾಜ್ಯಭ್ರಷ್ಟನನ್ನಾಗಿ ಮಾಡುವಂತೆ, ಒಬ್ಬ ಚೋರ ರಾಜನು ಇನ್ನೊಬ್ಬ ಚೋರ ರಾಜನನ್ನು ಸೋಲಿಸಿ ತನ್ನ ಚೋರ ರಾಜ್ಯದಿಂದ ಹೊರಗಟ್ಟುವನು. ಇಲ್ಲಿಯೂ ಹೀಗೆಯೇ ಆಯಿತು. ಸಿಜಾರಿ ತನ್ನ ಪ್ರತಿದ್ವಂದ್ವಿಗಳೊಡನೆ ಅನೇಕ ಯುದ್ಧಗಳನ್ನೆಸಗಿ ಕೊನೆಗೆ ಕ್ರಿ. ಶ. ೧೯೩೧ನೆಯ ವಸಂತಮಾಸದಲ್ಲಿ

ಸಂಪೂರ್ಣ ವಿಜಯಿಯಾಗಿ, ಲಂಡನಿನ ಸೋಹೋ ಮತ್ತು ಇತರ ವಿಭಾಗಗಳ ಸರ್ವ ತಸ್ಕರರ ನೇತೃತ್ವವನ್ನು ಸಂಪಾದಿಸಿದ. ಸಾಫ್ಟ್ಸ್‌ಬರಿ ಎವಿನ್ಯೂವಿನ ಗಡಿಯೊಳಕ್ಕೆ ಬೇರೆ ಯಾವ ಚೋರ ರಾಜನಿಗೂ ಕಾಲಿಕ್ಕುವ ಶಕ್ತಿ ಇರಲಿಲ್ಲ.

ಬರಬರುತ್ತ ಲಂಡನಿನ ಈ ಅಂಚಿನಿಂದ ಆ ಅಂಚಿನ ವರೆಗಿನ ಎಲ್ಲ ತಸ್ಕರರಿಗೂ ಇವನ ಖ್ಯಾತಿ ಗೊತ್ತಾಯಿತು.—ಲಂಡನಿನಲ್ಲಿ ಒಬ್ಬ ಕಳ್ಳರೊಡೆಯನ ಅವತಾರವಾಗಿದೆ, ಅತನ ಹೆಸರು ಸೀಜರ್; ಅವನು ಒಂದು ಗುಂಪಿನ ಅರಸ ಮಾತ್ರ ಅಲ್ಲ, ಚೋರ ಸಮ್ರಾಟನೇ ಆಗಿದ್ದಾನೆ; ಇಟಾಲಿಯನ್ನನಾದರೂ ಅವನ ಶಕ್ತಿ–ಯುಕ್ತಿ ನಿಸ್ಸೀಮವಾದದ್ದು; ಇಡೀ ಇಂಗ್ಲಂಡಿನಲ್ಲಿಯೇ ಯಾರೂ ಅವನಿಗೆಮರಿಲ್ಲ; ಇತ್ಯಾದಿ

ಇದೇ ಸಿಜಾರೆ ಜೇನಾನ ಪರಿಚಯ. ಆದಿನ ಬ್ಲೇಕ್ ಕೆಫೆಯ ಬಾಗಿಲಲ್ಲಿ ಕಂಡದ್ದು ಇವನನ್ನೇ.

ಫ್ರಿಜರೀ ಸ್ಟ್ರೀಟಿನ ಬಳಿ ಕಿರಿಯಗಲಾದ ಒಂದು ಓಣಿಯಿತ್ತು. ಆ ಓಣಿಯ ತುದಿಯಲ್ಲಿ ಒಂದು ಸಣ್ಣ ಕಟ್ಟಡ. ಅದರೆದುರು ಒಂದು, ಚಿಕ್ಕ ಕಾರು ಬಂದು ನಿಂತಿತು. ಆ ಕಟ್ಟಡದ ಪಕ್ಕದ ಮಳಿಗೆಯಲ್ಲಿ ಒಂದಕ್ಕೆ ಅಂಗಡಿಯಿದ್ದಿತು, ಈಗದು ಇಲ್ಲ. ಗೋಡೆಯ ಮೇಲೆ ಬರೆದಿದ್ದ ಅಂಗಡಿಕಾರನ ಹೆಸರು ಸುಣ್ಣಸಾರಣೆಯಲ್ಲಿ ಅಡಗಿಹೋಗಿತ್ತು.

ಇಬ್ಬರು ಕಾರಿನಿಂದ ಇಳಿದರು ಅವರು ಅನುಚರರಾದರೂ ಅವರ ಉಡಿಗೆ ತೊಡಿಗೆ ಬೆಡಗಿನದಾಗಿತ್ತು. ಅವರ ಹಿಂದಿನಿಂದ ಒಬ್ಬ ಯುವತಿ ಇಳಿದಳು. ತತ್‌ಕ್ಷಣವೇ ಒಬ್ಬ ಅನುಚರನು ಪಿಸ್ತೂಲನ್ನು ಅವಳ ಬೆನ್ನಿಗೆ ಗುರಿಯಿಟ್ಟು ಕರ್ಕಶಸ್ವರದಿಂದ ಆಜ್ಞಾಪಿಸಿದ: "ಬಾಯಿಮುಚ್ಚಿಕೊಂಡು ಸುಮ್ಮನೆ ನಿಂದಿರು. ಚೀರಿದರೆ ಗೀರಿದರೆ ಸಾಯಬಡಿಯುವೆ!"

ಒಂದು ದೊಡ್ಡ ಕೋಟು ಯುವತಿಯ ಮೈಯನ್ನೆಲ್ಲ ಮುಚ್ಚಿತ್ತು. ಅವಳ ದೇಹ ಭಯದಿಂದ ನಿಶ್ಚೇಷ್ಟವಾದಂತಿತ್ತು; ಎದೆ ದುರುದುರು ಕಂಪಿಸುತ್ತಿತ್ತು. ಅವಳು ಸ್ಥಿರಭಾವದಿಂದ ನಿಂತುಕೊಂಡಳು. ಮರುಕ್ಷಣದಲ್ಲಿ ಕಾರಿನಿಂದ ಇನ್ನೊಬ್ಬ ಮನುಷ್ಯ ಇಳಿದುಬಂದ. ವಿಶಾಲ ಸ್ಥೂಲ ಶರೀರ; ಅತಿಭೀಷಣ ಆಕೃತಿ; ಅವನ ಪ್ರಕೃತಿಯೇ ಹಿಂಸ್ರಪಶುವಿನಂತೆ; ಅವನೇ ಸಿಜಾರೆ ಜೇನಾ.

ಸಿಜಾರೆಯ ಸಂಜ್ಞೆಯಂತೆ ಅನುಚರರಿಬ್ಬರೂ ಯುವತಿಯನ್ನು ಕೈಹಿಡಿದೆಳೆದುಕೊಂಡು ಬಾಗಿಲ ಬಳಿ ಹೋದರು. ಅವರಲ್ಲೊಬ್ಬನು ಠಕ್ ಠಕ್ ಎಂದು ಬೆರಳಿಂದ ಕದವನ್ನು ಬಡಿದನು. ಆ ಬಡಿತದಲ್ಲಿ ಒಂದು ವಿಶೇಷವಿತ್ತು; ಸಾಂಕೇತಿಕ ಅರ್ಥವೇ ಹೊರಡುತ್ತಿತ್ತು. ಬಾಗಿಲು ತೆರೆಯಿತು. ಫ್ರೆಂಚನಂತೆ ಕಾಣುವ ಮನುಷ್ಯನೊಬ್ಬ ಕದದ ಮರೆಯಿಂದ ಇಣಕಿ, ತೀಕ್ಷ್ಣದೃಷ್ಟಿಯಿಂದ ಆಗಂತುಕರ ಮೋರೆ ನೋಡಿದ; ಬಳಿಕ ನಿಶ್ಶಬ್ದವಾಗಿ ಪಕ್ಕಕ್ಕೆ ಸರಿದು ಹೋದ. ಬಂದ ನಾಲ್ವರೂ ಒಳಗೆ ಪ್ರವೇಶಿಸಿದರು. ಕಾರು ನಿಶ್ಶಬ್ದವಾಗಿ ಹೊರಟುಹೋಯಿತು; ಕಟ್ಟಡದ ಬಾಗಿಲು ಮೊದಲಿನಂತೆ ಮುಚ್ಚಿತು.

ಯುವತಿಯೊಂದಿಗೆ ಸಿಜಾರೆ ಒಂದು ಕೋಣೆಯನ್ನು ಪ್ರವೇಶಿಸಿದ. ಗಾಢಾಂಧಕಾರವನ್ನು ಒತ್ತೊತ್ತಿ ತುಂಬಿರುವಂತಿತ್ತು ಅಲ್ಲಿ. ಅವನು ಬಿರಡಿಯೊತ್ತಿ ಬೆಳಗಿಸಿದ. ಅನುಚರನು ಯುವತಿಯ ಬೆನ್ನಿಗೆ ಪಿಸ್ತೂಲನ್ನು ಹಿಡಿದೇ ಇದ್ದ.

ಜ್ಞೀಕನ ಜೊತೆಗಿದ್ದ ಇಲಿನ್ ಹೆಲ್ಲರ್ ಆ ಯುವತಿ.

“ನೀನು ಅಲ್ಲಿ ಹೋಗಬೇಕೆನ್ನುವೆಯಾ?” ಫ್ರೆಂಚನೊಬ್ಬನು ಕಠೋರ ಸ್ವರದಿಂದ ಪರಿತ್ಯಕ್ತ ಅಂಗಡಿಯ ಕಡೆ ಬೆರಳು ಮಾಡಿ ತರುಣಿಗೆ ನುಡಿದ.

ಅದಕ್ಕೆ ಸಿಜಾರೆ ಹೇಳಿದ: “ಬೇಡ. ಅದಷ್ಟು ಗೋಪನೀಯ ಸ್ಥಳವಲ್ಲ. ನಾನು ಈ ಯುವತಿಯನ್ನು ನಾಲ್ಕು ಮಾತು ಆಡಿಸಬೇಕಾಗಿದೆ. ಆ ಕೋಣೆಯ ಹಿಂದಿನ ಕೋಣೆಗೆ ಹೋಗುತ್ತೇವೆ.’’

“ಅಲ್ಲಿ ಬೇರೆಯವರು ಇದ್ದಾರಲ್ಲವೆ?” ಆ ಫ್ರೆಂಚನೆಂದ.

“ಅದಕ್ಕಾಗಿ ಯೋಚನೆ ಬೇಡ. ಅವರನ್ನು ಹೊರಗೆ ಹಾಕಿಬಿಡು.’’

ಅನುಚರರು ಇಲಿನಳನ್ನು ಅಂಗಡಿಯಾಚೆಯ ಕೋಣೆಗೆ ಕರೆದೊಯ್ದರು; ಅಲ್ಲಿಂದ ಒಂದು ಇಕ್ಕಟ್ಟಾದ ಸಂದಿಯಲ್ಲಿ ಹಾಯ್ದು ಇನ್ನೊಂದು ಮನೆಯ ಕೋಣೆಯನ್ನು ಸೇರಿದರು. ಪಿಯಾನೋ ಸ್ವರದೊಡನೆ ಬೆರೆತ ಸಂಗೀತದಿಂದ ಪ್ರತಿಧ್ವನಿತವಾಗಿತ್ತು ಆ ಕೋಣೆ. ನಡು ನಡುವೆ ನಗೆಯ ಬುದ್ಬುದ ಏಳುತ್ತಿತ್ತು. ಸಿಜಾರೆ ಆ ಕೋಣೆಯ ಬದಿಯ ಮತ್ತೊಂದು ಕೋಣೆಯ ಬಾಗಿಲನ್ನು ತೆರೆಯಲು ಬೆಳಕು ಬಿದ್ದಿತು.

ಕೋಣೆ ದೊಡ್ಡದು. ಹಲವು ಬಗೆಯ ಸಾಧನ ಸಾಮಗ್ರಿ–ಚಿತ್ರಪಟಾದಿ

ಗಳಿಂದ ಸುಸಜ್ಜಿತವಾದದ್ದು. ನಾನಾ ದೇಶಗಳ ಸರಸಾಂಗಿಯರ ಚಿತ್ರಗಳು ಅಲ್ಲಿದ್ದವು; ಪ್ರಾಚೀನ ಯುಗದ ಇಟಾಲೀಯ ಆದರ್ಶಗಳನ್ನು ಪ್ರದರ್ಶಿಸುವ ಚಿತ್ರಗಳು ಎಷ್ಟೋ ಇದ್ದವು. ಅವೆಲ್ಲ ಸಿಜಾರೆಯ ಬೇಡಿಕೆಯಂತೆ ಚಿತ್ರಿತವಾದುವು. ತಾನು ಚಿತ್ರಶಿಲ್ಪದ ಅಭಿಜ್ಞನೆಂದೂ ರಸಿಕನೆಂದೂ ಅವನಿಗೆ ಒಳ್ಳೇ ಹೆಮ್ಮೆ.

ಪಿಯಾನೋ ಬಾಜಿಸುತ್ತ, ಒಬ್ಬ ಯುವಕ ಸ್ವರ ಕೂಡಿಸಿ ಹಾಡುತ್ತಿದ್ದ. "ಏ ಮಾರಾಯಾ, ಕಾಲೋಯಾತ್, ಸಾಕು ಮಾಡು ನಿನ್ನ ಸಂಗೀತಾಲಾಪ!–ನಿಲ್ಲಿಸು ನಿನ್ನ ಪಿಯಾನೋದ ಆರ್ತನಾದ!" ಸಿಜಾರೆ ಗಡುಸುದನಿಯಿಂದ ಹೇಳಿದ ಅವನಿಗೆ.

ಕಾಲೋಯಾತ್ ಅದನ್ನು ಗಮನಿಸದೆ ಪಿಯಾನೋ ದಂತಪಂಕ್ತಿಯ ಮೇಲೆ ಬೆರಳಾಡಿಸುತ್ತ, ಸಿಜಾರೆಯ ಮೋರೆ ನೋಡುತ್ತ, "ನನ್ನ ಹಾಡಿಗೆ ಅಡ್ಡಿಮಾಡಬೇಡಿ. ನಾನೇ ಕಟ್ಟಿದ ಹಾಡು ಇದು. ನಾಳೆ ಇದನ್ನು ಚೆರಿಂಗ್ ಕ್ರಶ್ ಅಪೆರಾದಲ್ಲಿ ಮಾರಬೇಕಾಗಿದೆ. ಅದಕ್ಕಾಗಿ ರಾಗ ತಾಳ ಕೂಡಿಸುತ್ತಿದ್ದೇನೆ" ಎಂದು ನುಡಿದು ಪುನಃ ಹಾಡತೊಡಗಿದ.

ಸರಿ. ಅವನು ಬಾಯಿ ತೆರೆಯುವುದೇ ತಡ, ಅವನ ಬೆನ್ನ ಮೇಲೆ ಚೆಲೋ ಒಂದೇಟು ಬಿತ್ತು. ಅದನ್ನು ತರಹರಿಸಿಕೊಳ್ಳಲಾರದೆ ಅವನು ಮುಗ್ಗರಿಸಿಬಿದ್ದ; ಅವನೊಡನೆ ಅವನ ಪೇಟಿಯೂ ಹೊರಳಿಬಿತ್ತು

"ಈಕ್ಷಣ ಇಲ್ಲಿಂದ ಹೊರಟು ಹೋಗು ಕತ್ತೆ! ಏನು ಮಹಾಗಾಯನ ಹಚ್ಚಿದ್ದೀ–ಕೇಳಿ ಕೇಳಿ ಕಿವಿ ಕೆಟ್ಟುಹೋದವು! ಮಗನ ಹಾಡಿನಲ್ಲಿ ಪ್ರತಿಭೆ ಉಕ್ಕುತ್ತದೆ ಹಾಗೇ!" ಸಿಜಾರೆ ಗರ್ಜಿಸಿದ; ಬಳಿಕ ಸಂಗೀತಪ್ರಿಯ ಶ್ರೋತೃಗಳನ್ನುದ್ದೇಶಿಸಿ, "ಎದ್ದೇಳಿರಿ ಎಲ್ಲರೂ ಇಲ್ಲಿಂದ!– ಏ ಟಿಸಿ ದಬ್ಬು ಕತ್ತು ಹಿಡಿದು ಹೊರಗೆ!"

ಸಂಗೀತಸುಧೆಯೊಡನೆ ನಿಜವಾದ ಸುಧೆಯ ಸೇವನೆಯೂ ನಡೆದಿತ್ತು. ಸಿಜಾರೆಯ ಗುಡುಗನ್ನು ಕೇಳಿ ಶ್ರೋತೃಗಳೆಲ್ಲರೂ ತಮ್ಮ ಪೇಲೆಯಲ್ಲಿದ್ದ ಮದ್ಯವನ್ನು ಒಂದು ಗುಟುಕಿನಲ್ಲಿ ಒಡಲಿಗೆ ಸೇರಿಸಿ ಬಾಯಿ ಒರಿಸಿಕೊಳ್ಳುತ್ತ ಹೊರಬಿದ್ದರು. ಒಬ್ಬ ಶ್ರೋತೃ ಮಾತ್ರ ಏಳಲಿಲ್ಲ. ಅವನೊಬ್ಬ ಒಳ್ಳೆಯ ವೇಷಧಾರೀ ಯುವಕ. ಅವನ ಉಡಿಗೆ ತೊಡಿಗೆಯ ಠೀವಿಯನ್ನು ನೋಡಿದರೆ

ಸುಶಿಕ್ಷಿತ ಸಮಾಜದ ಪರಿಚಯ ಅವನಿಗಿಲ್ಲ ಎನಿಸುತ್ತಿತ್ತು.

"ಏಕೆ, ನೀ ಕೂತೆ! ಏಳು, ತೊಲಗು ಬೇಗ" ಸಿಜಾರೆ ಗದ್ದರಿಸಿದ.

ಆ ಯುವಕನು ಸಿಜಾರೆಯ ಅಪ್ಪಣೆಯನ್ನು ಮನ್ನಿಸಲಿಲ್ಲ. ಬೀರಿನ ಗ್ಲಾಸನ್ನು ಬಾಯಿಗೆ ಹಚ್ಚಿ, ಮೆಲ್ಲಮೆಲ್ಲನೆ ಗುಟುಕರಿಸುತ್ತ, ಗ್ಲಾಸಿನಂಚಿನ ಮೇಲಿಂದ ಸಿಜಾರೆಯ ಕಡೆ ತಾತ್ಸಾರದ ದೃಷ್ಟಿಯನ್ನು ಬೀರಿದ.

"ಏ ದೈವಗೇಡಿ, ನನ್ನ ಮಾತೇನು ಕೇಳಲಿಲ್ಲವೆ? ಕುತುಕೊಂಡು ಬೀರ್ ಸೆಳ್ಯುತ್ತಿದ್ದೀ ಹಾಗೇ!"

ಯುವಕನು ಸಾವಕಾಶವಾಗಿ ಬೀರನ್ನು ಮುಗಿಸಿ ಅಚಲವಾದ ನೀಲಿಯ ಚಕ್ಷುತಾರಕೆಗಳನ್ನು ಮೇಲೆತ್ತಿ ಸಿಜಾರೆಯನ್ನು ನೋಡಿದ. ಬಳಿಕ ಮೆಲ್ಲನೆ ಎದ್ದು ನಿಂತು

"ಓಹೋ, ಸಾಫ್ಟ್‌ಸ್ಬರಿ ಎವಿನ್ಯೂದ ಮಹಾರಾಜರು! ಸರ್ವಶಕ್ತಿಮಾನ್ ಮಹಾಪುರುಷರು! ನಾನೊಬ್ಬನೇ ಕೂತಿದ್ದೇನೆ—ನನ್ನನ್ನು ಹೊರಗೆ ಹಾಕಲು ಇಷ್ಟೊಂದು ಆಗ್ರಹವೇಕೆ? ಇದು ಯಾವ ಸ್ಥಳ ಗೊತ್ತೊ?" ಎಂದ.

"ಎಲ್ಲ ಬಲ್ಲೆ. ನಿನಗಿನ್ನೂ ಹೆಚ್ಚಿಗೆ ತಿಳಿಯಬೇಕಾಗಿದ್ದರೆ ಅದನ್ನೂ ಹೇಳುತ್ತೇನೆ. ಡಾಸ್ಟಿ ಮಿಲರ್, ನೀನು ಇನ್ನೆಂದಿಗೂ ಇಲ್ಲಿಗೆ ಬರಲಾಗದು! ನೀನು ಬರಬೇಡ! ಒಂದು ವೇಳೆ ನೀನಿಲ್ಲಿ ಕಂಡದ್ದೇ ಆದರೆ ಸತ್ತೆಯೆಂದೇ ತಿಳಿ. ಏನು ತಿಳಿಯಿತಿಲ್ಲೋ ನಾನು ಹೇಳಿದ್ದು?"

ಮಿಲರ್ ತೀಕ್ಷ್ಣ ದೃಷ್ಟಿಯಿಂದ ಸಿಜಾರೆಯನ್ನೂ ಬಳಿಕ ಇಲಿನಳನ್ನೂ ಆಪಾದಮಸ್ತಕವಾಗಿ ನೋಡಿ ಮೆಲ್ಲ ಮೆಲ್ಲನೆ ಕೋಣೆಯಿಂದ ಹೊರಬಿದ್ದ.

"ನೀನಿನ್ನು ಕುಳಿತುಕೊಳ್ಳಬಹುದು" ಎಂದು ಇಲಿನಳಿಗೆ ಹೇಳಿ ಸಿಜಾರೆ "ಆ ಜಾಕೀಟು ಎಲ್ಲಿದೆ?" ಎಂದು ಅನುಚರರನ್ನು ಕೇಳಿದ. ಅನುಚರನು ಕೊಟ್ಟ ಜಾಕೀಟನ್ನು ಮೇಜಿನ ಮೇಲೆ ಹರಡಿ ಜೇಬುಗಳನ್ನು ಶೋಧಿಸುತ್ತ ಸಿಜಾರೆ ಅಸ್ಫುಟ ಸ್ವರದಲ್ಲಿ ಮಾತನಾಡಿದ: ದೈವಗೇಡಿ ಮರಿಸ್ ಏನೇನಿಟ್ಟಿದ್ದಾನೋ ನೋಡುವುದು ಅಗತ್ಯ. ಅನೇಕರು ಜೇಬಿನಲ್ಲಿ ಕ್ಷುದ್ರ ಕಾಗದ ಚೂರುಗಳನ್ನಿಟ್ಟಿರುತ್ತಾರೆ, ನನನಗೆ ಗೊತ್ತು; ಆದರೆ ಅವನ್ನು ಪರೀಕ್ಷಿಸಿದರೆ ಎಷ್ಟೋ ಅಮೂಲ್ಯ ಗುಪ್ತ ಸಮಾಚಾರಗಳು ಗೊತ್ತಾಗುತ್ತವೆ. ನಾನು—ಎಲಾ ಇವನಪ್ಪನ—ಇದೇನಿದು?"

ಎದೆಯ ಮೇಲಿನ ಜೇಬಿನಲ್ಲಿದ್ದ ಕೆಲ ಪತ್ರಗಳನ್ನು ಪರೀಕ್ಷಿಸುತ್ತ ಸಿಜಾರೆ ವಿಸ್ಮಿತನಾದನು. ಒಂದು ಕವರಿನ ಮೇಲಿದ್ದ ವಿಳಾಸವನ್ನೋದಿ ಅವನ ಆಶ್ಚರ್ಯ ಎಲ್ಲೆ ಮೀರಿತು.–'ರಾಬರ್ಟ್ ಬ್ಲೇಕ್, ಬೇಕರ್ ಸ್ಟ್ರೀಟ್!' ವಿಳಾಸವನ್ನು ಉತ್ತೇಜಿತ ಸ್ವರದಲ್ಲಿ ಉಚ್ಚರಿಸಿ ಸಿಜಾರೆ ತನ್ನ ಸಹಚರರನ್ನು ಕೇಳಿದ. "ಇದರ ಅರ್ಥವೇನು? ಆ ತುಂಬ್ಬುಗಾರರ ಮಗನ ಕಾಗದ ಮಾರಿಸನ ಜೇಬಿನಲ್ಲಿ!"

ಅನುಚರರಿಬ್ಬರೂ ಆಶ್ಚರ್ಯದಿಂದ ಒಬ್ಬರ ಮೋರೆ ಒಬ್ಬರು ನೋಡಿದರು. "ಬೀದಿಯಲ್ಲಿ ನಾವು ಹಿಡಿದದ್ದು ಮಾರಿಸನನ್ನೇ ಅಲ್ಲವೋ ಏನೋ!" ಎಂದರವರು.

"ಅಲ್ಲ ನಿಶ್ಚಯವಾಗಿ ಅವನು ಮಾರಿಸ್ ಅಲ್ಲ. ಎಲಾ ಕತ್ತೆಗಳೇ, ನೀವು ಯಾರನ್ನು ಬೇಕೆಂದು ಹಿಡಿದಿದ್ದಿರೋ ಅವರು ಯಾರೆಂದು ತಿಳಿಯಲಿಲ್ಲವೆ? ಮೂರ್ಖರು!" ಸಿಜಾರೆ ಬಾಯಿಗೆ ಬಂದ ಶಬ್ದಗಳಿಂದ ಅನುಚರರನ್ನು ಸನ್ಮಾನಿಸಿದನು. ಬಳಿಕ ಮುಖ ವಿಕಾರದೊಡನೆ ಅವನೆಂದ–"ಮೂದಾಣೆ ಜಲಿಯ ಮಗ ನಾವಲಿಗ; ರಾಬರ್ಟ್ ಬ್ಲೇಕರಂಥ ದಕ್ಷ ತುಂಟ್ಟುಗಾರನ ಕಾಗದ ಪತ್ರ ಅವನ ಜೇಬಿನಲ್ಲಿ ಹೇಗೆ? ಇಂಥ ತಿಳಿಗೇಡಿಗಳ ಕೈಯಲ್ಲಿ ಏನಾದರೂ ಕೆಲಸ ಒಪ್ಪಿಸಬಹುದೇ? ಬ್ಲೇಕನ ಭೆಟ್ಟಿಯಾದ ಆ ಹಂದಿ ಎಲ್ಲಿ?"

"ನಾನೇ ಒಡೆಯ. ಸಲೂನಿನ ಬಾಗಿಲಿಂದ ಹೊರಬಿದ್ದವನು ತುಂಬ್ಬುಗಾರ ಬ್ಲೇಕನೆಂದಿರಾ?"

"ಹಾಂ ಹಾಂ!" ಎಂದು ನುಡಿದು ಸಿಜಾರೆ ಇಲಿನಳ ಕಡೆ ಹೊರಳಿ, "ಅದಕ್ಕಿಂತ ಹತ್ತು ನಿಮಿಷ ಮೊದಲು ನೀನು ಅವನೊಡನೆ ಕೆಫೆಯಲ್ಲಿ ಒಂದೇ ಮೇಜಿಗೆ ಕೂತಿದ್ದೆ; ಹೌದೋ ಅಲ್ಲವೋ? ನಾನೆನ್ನುವುದು ಕೇಳಿಸಿತೇ?" ಎಂದ.

ಭಯದಿಂದ ಮತ್ತು ಅತ್ಯಂತ ಮಾನಸಿಕ ಉದ್ವೇಗದಿಂದ ಅವಳ ಮುಖ ಬಿಳಿಚಿಕೊಂಡಿತ್ತು. ಅವಳು ಏನೋ ಮಾತನಾಡಬೇಕೆಂದು ಹವಣಿಸಿದಳು; ಆವಳ ಬಾಯಿಂದ ಯಾವ ಮಾತೂ ಹೊರಬರಲಿಲ್ಲ. ಅತಿ ಕಷ್ಟದಿಂದ ಆತ್ಮಸಂಯಮನ ಮಾಡಿಕೊಂಡು ಸ್ಥಿರಚಿತ್ತಳಾಗಿ ಕುಳಿತಳು. ಅವಳ ನಿರುತ್ತರವನ್ನು ಕಂಡು ಸಿಜಾರೆ ಗರ್ಜಿಸಿದ:

"ನನ್ನ ಪ್ರಶ್ನೆಗಳಿಗೆ ಶೀಘ್ರವಾಗಿ ಉತ್ತರ ಕೊಡು. ಅಸಾಧ್ಯ ನಾರಿಯು ದನ್ನು ಕೂಡ ನಾನು ಬಾಯಿ ಬಿಡಬಲ್ಲೆ!"

"ಇದನ್ನು ನೀವು ಹೇಗೆ ಅರಿತಿರಿ?" ಇಲಿನ್ ಆಶ್ಚರ್ಯವಾಗಿ ಕೇಳಿದಳು.

"ನೀನು ಬೀರುವಿನ ಎದುರು ಬದಿಯ ಕುಳಿತಿದ್ದಾಗ, ನಾನು ಕನ್ನಡಿ ಕಂಡಿದ್ದೇನೆ ನನ್ನ ಕಣ್ಣು ತಪ್ಪಿಸ ಬಲ್ಲದು. ಯಾವುದೂ ನನ್ನ ಕಣ್ತಪ್ಪಿ ಸುಳಿಯಲಾರದು. ನಿನಗೆ ಗೊತ್ತಿರಲಿಕ್ಕಿಲ್ಲ ನಾನು ಆ ಕೋಣೆಯ ಬಾಗಿಲಲ್ಲಿ ನಿಂತಿದ್ದೆ; ನಿಂತಲ್ಲಿ ಅಲುಗಾಡದೆ ನಾನು ನಿನ್ನ ಅದರ ಅಷ್ಟರಲ್ಲಿಯೇ ಸಿಗರೇಟುಗಳನ್ನು ನೋಡಿದೆ, ನೋಡಿದೊಡನೆಯೇ ಗುರುತಿಸಿದೆ. ಕಾರ್ಯಾಗಾರದೊಡನೆ ಅಲ್ಲಿಗೆ ನೀನೇ ಹೋಗಿದ್ದೆ? ಏನು ನಡೆಸಿದ್ದಿರಿ?"

ಸಿಜಾರಿಯ ಕ್ರೂರ ಪ್ರದೀಪ್ತ ನೇತ್ರಗಳನ್ನು ಕಂಡು ಭಯವಿಹ್ವಲೆಯಾದಳು. "ಇಂದು ರಾತ್ರಿ ಪೋಲಿಸರು ನನ್ನನ್ನು ಠಾಣ್ಯಕ್ಕೆ ಕರೆದೊಯ್ದಿದ್ದರು. ನನ್ನನ್ನು ಇನ್ಸ್‌ಪೆಕ್ಟರರ ಕಡೆಗೆ ಒಯ್ದಾಗ ಬ್ಲೇಕರು. ಅವರೊಡನೆ ಮಾತನಾಡುತ್ತ ಕುಳಿತಿದ್ದರು. ನಾನು ನಿರಪರಾಧಿಯಾಗಿದ್ದುದನ್ನು ಕಂಡು ಬ್ಲೇಕರು ದಯೆಹುಟ್ಟಿ ನನ್ನ ಬಗ್ಗೆ ಹೊಣೆಯಾದುದರಿಂದ ನನ್ನ ಬಿಡುಗಡೆಯಾಯಿತು."

ಸಿಜಾರಿ ತೀಕ್ಷ್ಣ ದೃಷ್ಟಿಯಿಂದ ಇಲಿನಳ ಮುಖವನ್ನು ನೋಡಿ ಅವಳು ಹೇಳುವುದು ನಿಜವೋ ಸುಳ್ಳೋ ಎಂಬುದನ್ನರಿತುಕೊಳ್ಳಲು ಯತ್ನಿಸಿದ. ಆಮೇಲೆ ವ್ಯಂಗ್ಯಾರ್ಥದಲ್ಲಿ ಮಾತನಾಡಿದ: "ಅವನು ನಿನ್ನ ಹೊಣೆಯಾಗಿ ಬಿಡುಗಡೆ ಮಾಡಿದನೇ? ಹೂಂ. ಆ ಪತ್ತೇದಾರನ ಮನಸು ಅದೆಷ್ಟು ಧಾರಾಳ! ಅವನಿಗಿಷ್ಟು ದಯೆ ಎಂದರೆ ಸಹಜವಾಗಿಯೇ ನಂಬಿಕೆಯೇ ಹುಟ್ಟುವುದಿಲ್ಲ. ಕೇಳಿದರೆ ಯಕ್ಷ ಕಥೆಯೆಂದೆನಿಸುತ್ತದೆ!"

ಇಲಿನ್ ದೃಢಸ್ವರದಿಂದ ಉತ್ತರವಿತ್ತಳು: "ಆದರೆ ನಾನು ಸತ್ಯ ಕಥೆಯನ್ನೇ ಹೇಳುತ್ತಿದ್ದೇನೆ. ನಾನು ಪೋಲಿಸರ ಬಲೆಗೆ ಬಿದ್ದು ಠಾಣ್ಯಕ್ಕೆ ಹೋಗಬೇಕಾಯಿತು, ಮತ್ತು—"

"ಅದೆಲ್ಲ ನನಗೆ ಗೊತ್ತು—ನೀನು ಸಿಯಾರಾ ಬೆಲಾಮಿಟಿಯೊಡನೆ ಗುದ್ದಾಡುತ್ತಿದ್ದಿ, ಮುರಾಟಿಯ ನೃತ್ಯಮಂದಿರದಲ್ಲಿ; ಅವನು ನನ್ನ ಏಜಂಟ, ನಾನು ಹೇಳಿದಂತೆ ನಡೆಯುತ್ತಾನೆ. ಅವನು ಬೇರೆ ಗುಂಪಿನವನಲ್ಲ, ನಮ್ಮವನೇ; ನಿನ್ನ ಅಥವಾ ನಿನ್ನ ಗಂಡನ ಯಾವ ಸಂಬಂಧವೂ ಅವನಿಗಿಲ್ಲ."

"ಸರಿ. ಪೋಲಿಸರು ನನ್ನನ್ನು ಅಪರಾಧಿಯೆಂದು ಠಾಣ್ಯಕ್ಕೆ ಹಿಡಿದೊಯ್ದದ್ದು ನಿಮಗೆ ಗೊತ್ತಿದೆ. ಹಾಗಾದರೆ ಅಲ್ಲಿ ಬ್ಲೇಕರು ಹೊಣೆಯಾಗದಿದ್ದರೆ ನನ್ನ ಬಿಡುಗಡೆ ಹೇಗಾಗುತ್ತಿತ್ತು?"

"ನಿನ್ನ ಮಾತಿನ ಬಗ್ಗೆ ನಾನು ಅವಿಶ್ವಾಸಪಟ್ಟಿಲ್ಲ; ನೀನು ಸುಳ್ಳು ಹೇಳುತ್ತೀ ಎಂದೆನ್ನುವುದಿಲ್ಲ. ಆದರೆ ನಿನ್ನಿಂದ ಇನ್ನೂ ಒಂದು ಸತ್ಯವನ್ನು ತಿಳಿದುಕೊಳ್ಳಬೇಕಾಗಿದೆ. ಬ್ಲೇಕ್ ಮರಿಸನ ಅಂಗಡಿಯ ಬಾಗಿಲಲ್ಲಿ ಪ್ರವೇಶ ಮಾಡಿದ್ದು ಹೇಗೆ?"

"ಅದು ಹೇಗೆ ಹೇಳಲಿ? ಆದರೆ ನನಗನಿಸುತ್ತದೆ—ಅವರು ನನ್ನನ್ನು ಅನುಸರಿಸಿರಬಹುದು."

"ಏಕೆ?"

"ಅದನ್ನಾದರೂ ಹೇಗೆ ಹೇಳುವುದು? ಇನ್ನೊಬ್ಬರು ಯಾವ ಉದ್ದೇಶದಿಂದ ಏನು ಮಾಡುತ್ತಾರೆಂಬುದು ನನಗೆ ಹೇಗೆ ತಿಳಿಯಬೇಕು? ಆದರೆ ನಾನು ಅವರಿಗೆ ಇಷ್ಟು ಮಾತ್ರ ಹೇಳಿದ್ದೆ—ಈ ರಾತ್ರಿ ಬಹಳ ಅಗತ್ಯದ ಒಂದು ಕೆಲಸವಿದೆ, ಅದಕ್ಕಾಗಿ ಒಬ್ಬಳೇ ಹೋಗಬೇಕಾಗಿದೆ; ಅರ್ಥಾತ್ ನನ್ನನ್ನು ಅನುಸರಿಸಬಾರದೆಂದು ಇಂಗಿತವಾಗಿ ಸೂಚಿಸಿದ್ದೆ.! ಆದರೂ ಅವರಿಗೆ ನನ್ನ ಅಗತ್ಯದ ಕೆಲಸ ಏನಿರಬಹುದೆಂದು ತಿಳಿಯುವ ಉತ್ಸುಕತೆ ಅವರಿಗುಂಟಾಗಿರಬೇಕು. ನಾನು ಎಲ್ಲಿ ಹೋಗುತ್ತೇನೆಂಬುದನ್ನು ನೋಡುವುದಕ್ಕಾಗಿಯೇ ನನ್ನನ್ನು ಅನುಸರಿಸಿರಬೇಕೆಂದು ನನಗೆನಿಸುತ್ತದೆ."

"ನಿನ್ನ ಮಾತು ಸತ್ಯವಿದ್ದರೂ ಇರಬಹುದು. ಆದರೆ ಒಂದು ವಿಸ್ಮಯದ ವಿಷಯವೆಂದರೆ—ನೀನು ಸರಿಯಾಗಿ ಕಾಸ್ಮೋಪೋಲಿಸ್ ಹೋಟೆಲಿನ ವಿಪರೀತ ದಿಕ್ಕಿನಲ್ಲಿ ಹೋಗಿ ನಿಂತುಕೊಂಡೆ. 'ಇದಕ್ಕಿಂತ ವಿಸ್ಮಯದ ಮಾತೆಂದರೆ, ನೀನು ನಿನ್ನ ಮನೆಯ ದಿಕ್ಕು ಬಿಟ್ಟು ಬೇರೆ ಕಡೆಗೆ ಮುಂದುವರಿಯಲಿಲ್ಲವೆ? ಅದೇಕೆ?"

"ಅವರು ನನ್ನನ್ನು ಅನುಸರಿಸಬಹುದು ಎಂಬ ಭಯದಿಂದ ಬೇರೆ ದಾರಿ ಹಿಡಿದೆ. ಅವರ ದೃಷ್ಟಿಯನ್ನು ತಪ್ಪಿಸಬೇಕೆಂಬುದು ನನ್ನ ಆಗ್ರಹ."

"ಇದರಲ್ಲಿ ನೀನು ಯಶಸ್ವಿಯಾದೆಯೆಂದು ತೋರುತ್ತದೆ;—ನಾವು ನಿನ್ನನ್ನು ಹಿಡಿದು ಕಾರಿನಲ್ಲಿ ಹಾಕಿದಾಗ ನಿನ್ನ ಹಿಂದೆ ಬ್ಲೇಕನನ್ನು ಕಾಣಲಿಲ್ಲ

ಆದರೆ ನೀನು ಬಲು ಧೂರ್ತ ಹೆಂಗಸು; ನಿನ್ನನ್ನು ನಂಬುವಂತಿಲ್ಲ. ಯಾರಾದರೂ ನನ್ನೊಡನೆ ಕಪಟಾಚರಣೆ ಅಥವಾ ವಿಶ್ವಾಸಘಾತ ಮಾಡಿದರೆ, ಅವರ ಗತಿ ಏನಾಗುವುದೆಂಬುದು ನಿನಗೆ ಗೊತ್ತಿರಬೇಕು. ನಿನ್ನ ಭಾಗ್ಯದಲ್ಲಿ ಏನಿದೆಯೋ ಈಗಲೇ ಹೇಳಲು ಬರುವಂತಿಲ್ಲ."

ಇಲಿನ್ ಹಠಾತ್ ಉತ್ತೇಜಿತಳಾಗಿ, "ಏನು! ನನ್ನನ್ನು ಕೊಲ್ಲುವಿರಾ? ನಿಮಗಿಷ್ಟು ಸಾಹಸವೇ?" ಎಂದಳು.

"ಏನು! ನನ್ನಲ್ಲಿ ಸಾಹಸವಿಲ್ಲವೆ?" ಸಿಜಾರೆ ಗರ್ಜಿಸಿದ: "ನೊರಜು–ನೊಣಗಳನ್ನೂ ಹೊಡೆದು ಹಾಕುವ ಸಾಹಸವಾಗುವುದಿಲ್ಲವೆ? ನನಗೆ–ಸಿಜಾರೆ ಜೇನಾಗೆ–ಹೀಗೆನ್ನಲು ಸಂಕೋಚವೆನಿಸದೇ ನಿನಗೆ? ಜನರು ಹುಳ ಹುಪ್ಪಡಿಗಳನ್ನು ಕೊಲ್ಲುವ ಹಾಗೆ ನಾನು ನಿನ್ನನ್ನು ನಿರ್ವಿಕಾರ ಚಿತ್ತದಿಂದ ಕೊಲ್ಲಬಲ್ಲೆ–ಈ ವಿಷಯದಲ್ಲಿ ನೀನೇನೂ ಸಂದೇಹಪಡಬೇಡ. ನೀನು ಕಾಣದಾಗುವೆ, ನಿನ್ನ ಬಗ್ಗೆ ಯಾರಿಗೂ ಏನೂ ಗೊತ್ತಾಗುವುದೇ ಇಲ್ಲ "

ಸಿಜಾರೆಯಂತಹ ಭೀಷಣ ಪ್ರಕೃತಿಯ ನರಘಾತಕ ದಸ್ಯು ಯಾರಿಗಾದರೂ ಇಂಥ ಮಾತನ್ನಾಡಿದರೆ ಅವಿಶ್ವಾಸಪಡಲಿಕ್ಕಾಗುವುದಿಲ್ಲ. ಅದು ಬರಿ ಮಾತೆಂದು ಇಲಿನಳಿಗೂ ಅನಿಸಲಿಲ್ಲ ಅವಳ ಕಣ್ಣುಗಳಲ್ಲಿ ಭಯ ಮೂಡಿತು, ಮೈ ಬೆವರೊಡೆಯಿತು. ಆದರೂ ಅವಳು ಯಥಾಶಕ್ತಿಯಾಗಿ ಸಂವರಿಸಿಕೊಂಡು ಸ್ಥಿರ ದೃಷ್ಟಿಯಿಂದ ಸಿಜಾರೆಯ ಮುಖ ನೋಡುತ್ತ, "ನಾನು ಜಾಮೀನಿನ ಮೇಲೆ ಬಿಡುಗಡೆಹೊಂದಿರುವುದನ್ನು ಮರೆತಿರಾ? ನಾಳೆ ನಿಶ್ಚಿತ ಸಮಯಕ್ಕೆ ಪೋಲಿಸ್ ಕೋರ್ಟಿನಲ್ಲಿ ಉಪಸ್ಥಿತಳಾಗದಿದ್ದರೆ, ಪೋಲಿಸರು ನನ್ನನ್ನು ಹುಡುಕುವರು; ನನ್ನ ಹೊಣೆ ಹೊತ್ತಿರುವ ಬ್ಲೇಕರು ಸರ್ವಥಾ ಸುಮ್ಮನೆ ಕೂಡುವುದಿಲ್ಲ. ನನ್ನನ್ನು ಕೋರ್ಟಿನಲ್ಲಿ ಒಯ್ದು ನಿಲ್ಲಿಸದಿದ್ದರೆ ಅವರು ಶಿಕ್ಷೆಗೆ ಗುರಿಯಾಗಬೇಕಾಗುವುದು. ಅವರನ್ನು ನಿಮ್ಮ ಕಾರ್ಯದಲ್ಲಿ ಕೈಹಾಕಲು ಉದ್ಯುಕ್ತಗೊಳಿಸುವುದರಿಂದ ನಿಮಗೆ ವಿಪತ್ತು ಅಥವಾ ಕೊಂದರೆ ಉಂಟಾಗುವುದಿಲ್ಲವೆಂದು ಬಗೆದಿರಾ?" ಎಂದಳು.

ಇಲಿನಳ ಮಾತು ಕೇಳಿ ಸಿಜಾರೆ ಕ್ರೋಧದಿಂದ ಹೂಂಕರಿಸಿದನು. ಆದರೆ ಆ ಮಾತನ್ನು ತಾತ್ಸಾರದಿಂದ ಹಾರಿಸಿಬಿಡಲು ಸಮರ್ಥನಾಗಲಿಲ್ಲ. ಅವನು ಮನಸ್ಸಂಯಮ ಮಾಡಿಕೊಳ್ಳಲಾರದೆ ತನ್ನ ಅನುಚರರಿಗೆ "ಕಟ್ಟಿರಿ

ಇವಳನ್ನು! ಇವಳಪ್ಪ ಬ್ಲೇಕ್ ಏನು ಮಾಡುತ್ತಾನೋ ಮಾಡಲಿ ನೋಡುವ! ಇಂಥ ಹತ್ತು ಜನ ಪತ್ತೇದಾರರನ್ನು ಜೇಬಿನಲ್ಲಿಟ್ಟುಕೊಂಡು ಪೃಥ್ವೀಪರ್ಯಟನ ಮಾಡಬಲ್ಲೆ ನಾನು! ಕಟ್ಟಿರಿ ಬೇಗ. ತನ್ನ ದೈವದಲ್ಲಿ ಏನಿದೆ ಎಂಬುದನ್ನು ಈಕೆ ಮುಂದೆ ಕಂಡುಕೊಳ್ಳಲಿ!" ಎಂದು ಅಪ್ಪಣೆಯಿತ್ತ.

ಅನುಚರರಿಬ್ಬರೂ ಇಲಿನಳನ್ನು ಒಂದು ಕುರ್ಚಿಯಲ್ಲಿ ಕುಳ್ಳಿರಿಸಿ, ಹಗ್ಗದಿಂದ ಬಿಗಿಯಾಗಿ ಅದಕ್ಕೆ ಬಿಗಿದರು. ಇನ್ನೊಂದು ಕುರ್ಚಿಯನ್ನು ಅವಳೆದುರು ಎಳೆದುಕೊಂಡು ಸಿಜಾರೆ ಕುಳಿತ. ಒಂದು ಚಿರೂಟನ್ನು ಹೊತ್ತಿಸಿ ಕ್ಷಣಕಾಲ ಧೂಮ್ರಪಾನಲೋಲನಾದ.

"ತುಂಬ್ಬಗಾರ ಬ್ಲೇಕನೊಡನೆ ನೀನು ಏನು ಆಟ ಹೂಡಿದ್ದೀ, ಹೇಳು." ಹೊಗೆ ಬಿಡುತ್ತ ಸಿಜಾರೆ ಕೇಳಿದ.

ಆ ಹೊಗೆ ಇಲಿನಳ ಮೂಗಿನಲ್ಲಿ ಹೊಕ್ಕು ಅವಳಿಗೆ ಕೆಮ್ಮು ಹತ್ತಿತು. ಕೆಮ್ಮು ನಿಂತ ಮೇಲೆ "ನಾನು ಏನೂ ಆಟ ಹೂಡಿಲ್ಲ." ಎಂದಳು.

"ಸತ್ಯವಾಗಿ?"

"ನಿಮ್ಮೆದುರು ಸುಳ್ಳು ಹೇಳಿದರೆ ಲಾಭವಿಲ್ಲ. ನನ್ನ ಮಾತು ಸತ್ಯ, ಖಂಡಿತ ಸತ್ಯಪ್ರಮಾಣ ಮಾಡಿ ಹೇಳುತ್ತೇನೆ"

"ಅಲ್ಲ. ಅದು ಸತ್ಯವಲ್ಲ. ನಿನ್ನ ಆಣೆ ಚೂರಿ ನಾನು ನಂಬುವುದಿಲ್ಲ. ನೀನು ಹೇಳುವುದು ಸುಳ್ಳು. ನನಗದು ಬೇಕಾಗಿಲ್ಲ, ಸತ್ಯ ಹೇಳು" ಎಂದು ಸಿಜಾರೆ ಜ್ವಲಂತ ಚಿರೂಟನ್ನು ಇಲಿನಳ ಕೆನ್ನೆಯ ಸಮೀಪದಲ್ಲಿ ಹಿಡಿದನು. ಅದರ ಬೆಂಕಿಯ ಚುರುಕಿನಿಂದ ಅವಳ ಮುಖ ವಿಕಾರಗೊಂಡಿತು. ಸಿಜಾರೆ ಪಿಶಾಚದಂತೆ ನಕ್ಕು, "ಗಲ್ಲಕ್ಕೆ ಬಿಸಿ ತಗಲಿತೆಂದು ಮೋರೆ ವಿಕೃತವಾಯಿತೆ? ಚಿರೂಟಿನ ಬೆಂಕಿಯಿಂದ ಗಲ್ಲ ಸುಟ್ಟು ಗುಳ್ಳೆ ಏಳಬಹುದೆಂದು ಅಂಜಿದೆಯಾ? ಆದರೆ ಸತ್ಯ ಸಂಗತಿ ಹೇಳದಿದ್ದರೆ ನಿನ್ನ ಗಲ್ಲವನ್ನೇನೂ ಸುಡುವುದಿಲ್ಲ. ಚಿರೂಟನ್ನು ಕಣ್ಣುಗಳಿಗೊತ್ತಿ ನಿನ್ನ ಸುಂದರ ನಯನಗಳನ್ನೇ ಕಳೆದುಬಿಡುತ್ತೇನೆ. ನೀನು ಸಾವಿಗಿಂತ ಹೆಚ್ಚಿನ ಸಂಕಟವನ್ನು ಅನುಭವಿಸುವೆ. ಸಾಯುವ ವರೆಗೆ ಕುರುಡಿಯಾಗುವೆ."

ಚುರೂಟನ್ನು ಅವಳ ಕಣ್ಣಿನ ಹತ್ತಿರ ಹಿಡಿದು, ಬಾಯಿತುಂಬ ತುಂಬಿದ ಹೊಗೆಯನ್ನು ಕಣ್ಣಲ್ಲಿ ಊದಿದನು. ಅವಳ ಕಣ್ಣುಗಳು ಉರಿಯತೊಡಗಿದವು. ಕೈಗಳನ್ನು ಕುರ್ಚಿಗೆ ಕಟ್ಟಿದ್ದರಿಂದ ಕಣ್ಣುಗಳನ್ನು ತಿಕ್ಕಿಕೊಳ್ಳಲಾಗಲಿಲ್ಲ.

ಅವಳು ಸಂಕಟದಿಂದ ಚೀರಿಕೊಂಡಳು: "ಸರಪಿಶಾಚಿ, ನಾನು ಏನೊಂದೂ ಅರಿಯೆ. ನಾನು—"

ಸಿಜಾರೆಯ ಹಿಂದುಗಡೆ ಶಬ್ದವಾದುದರಿಂದ ಅವನು ತಟ್ಟನೆ ಎದ್ದು ನಿಂತ. ಇಲಿನಳ ಮಾತು ಅರ್ಧದಲ್ಲೇ ನಿಂತಿತು. ಅಷ್ಟರಲ್ಲಿ ಕೋಣೆಯ ಬಾಗಿಲು ತೆರೆದು ಒಬ್ಬ ಯುವಕನು ವ್ಯಗ್ರಭಾವದಿಂದ ಪ್ರವೇಶಿಸಿದ.

೪

ಆಗಂತುಕ ಯುವಕ ಬೆಚ್ಚಿ ಬಾಗಿಲ ಬಳಿಯೇ ನಿಂತ. ಆ ತರುಣನ ಶರೀರ ಕೊಂಚ ಬಡಕ. ಕೂದಲು ಕಪ್ಪು, ಗುಂಗುರು, ಮೃದು; ಹಣೆಯಿಂದ ತಲೆಯ ಮೇಲ್ಗಡೆ ಬಾಚಿಕೊಂಡಿದ್ದ. ಸುರೂಪಿಯೆಂದೇ ಹೇಳಬೇಕು. ಅವನ ಉಡಿಗೆ ತೊಡಿಗೆಯು ಬಣ್ಣ ಧೂಸರ; ಅವನ ಕಾಲರು, ಟೈ, ಕರವಸ್ತ್ರ, ಕಾಲು ಚೀಲ, ಬೂಟು ಎಲ್ಲವೂ ಧೂಸರ ಬಣ್ಣದವೇ. ಅದೇ ಬಣ್ಣ ಅವನಿಗೆ ಪ್ರಿಯ ವಾದುದಿರಬೇಕು; ಅಥವಾ ಅವನ ಕಾರ್ಯಸಿದ್ಧಿಗೆ ಅನುಕೂಲವಾದುದಿರ ಬೇಕು.

ಬಂದ ಯುವಕನ ಮುಖ ನೋಡಿ ಸಿಜಾರೆ ನಿಶ್ಚಿಂತನಾದನು. ಮುಗುಳು ನಗೆ ನಕ್ಕು ಅವನೆಂದನು. "ಓಃ, ಲುಯಿಗಿನಿ, ನೀನು? ಹೀಗೆ ಹಠಾತ್ತಾಗಿ ಒಳಗೆ ಬರುತ್ತಲೂ ನನಗೆಸಿತ್ತು—ಏನೆನಿಸಿತ್ತೆಂಬುದನ್ನು ಹೇಳದಿದ್ದರೂ ಏನೂ ನಷ್ಟವಿಲ್ಲ. ಆದರೆ ಇನ್ನೆಂದೂ ಈ ರೀತಿ ನೀನು ಪಕ್ಕನೆ ನನ್ನೆದುರು ಬರಕೂಡದು. ಹೇಳದೆ ಕೇಳದೆ, ಬಾಗಿಲ ನೂಕಿಕೊಂಡು ದುತ್ತೆಂದು ಬರುವುದು ನನಗೆ ಸೇರುವುದಿಲ್ಲ. ಇರಲಿ; ನೀನು ಏನು—"

ಲುಯಿಗಿನಿ ಅಷ್ಟಕ್ಕೇ ದಲಪತಿಯ ಪ್ರಶ್ನೆಯನ್ನು ಅರಿತುಕೊಂಡು ಉತ್ತರವಿತ್ತ: "ಹಾಂ, ಬಲೋನಿನಲ್ಲಿ ನಾನವನನ್ನು ಕಂಡಿದ್ದೆ; ತಾವು ಹೇಳಿದ ಹಾಗೆಯೇ ಕೆಲಸ ಪೂರಯಿಸಿದ್ದೇನೆ. ಆ ಹತಭಾಗ್ಯನಿಗೆ ನನ್ನಲ್ಲಿ ಸಂದೇಹವೇ ಉಂಟಾಗಲಿಲ್ಲ. ಅವನ ಹಣೆಬರಹ ಇದ್ದಂತೆಯೇ ಘಟಿಸಿತು; ಯಾರಿಗೂ ಗೊತ್ತಾಗಲಿಲ್ಲ."

ಮತ್ತೇನೂ ಮಾತಾಡದೆ ಲುಯಿಗಿನಿ ನಿಂತುಕೊಂಡ. ಅವನು ಸ್ವಲ್ಪ

ಮೋರೆ ಹೊರಳಿಸಿದಾಗ ಇಲಿನಳ ಮೇಲೆ ದೃಷ್ಟಿ ಬಿತ್ತು. ಒಬ್ಬ ಅಪರಿಚಿತ ಸುಂದರ ಯುವತಿ ಆ ಕೋಣೆಯಲ್ಲಿ ಆಬದ್ಧಳಾಗಿರುವುದನ್ನು ಕಂಡು ಅವನಿಗೆ ಅತ್ಯಂತ ವಿಸ್ಮಯವಾಯಿತು.

" ಇದೇನು ಸಮಾಚಾರ ಒಡೆಯರೆ! " ಎಂದು ಮೆಲುನುಡಿಯಲ್ಲಿ ನುಡಿದ.

ಸಿಜಾರೆ ಎದ್ದು ಅವನೆದುರಿಗೆ ಹೋಗಿ, ಮೆಲ್ಲನೆ ನಾಲ್ಕಾರು ಮಾತು ಗಳನ್ನು ಕ್ಷಿಪ್ರದಲ್ಲಿ ಹೇಳಿ ಮುಗಿಸಿದ. ಅದನ್ನು ಕೇಳಿ ಲುಯಿಗಿನಿಯ ಹುಬ್ಬು ಗಳು ಆಕುಂಚಿತವಾದವು "ಇಂಥ ಲಹರಿಯನ್ನು ಬಿಟ್ಟುಬಿಡಿರಿ ಒಡೆಯರೇ. ಈ ವ್ಯಾಪಾರದಲ್ಲಿ ನನ್ನನ್ನು ತೊಡಕಿಸಲಾರಿರೆಂದು ಆಶಿಸುತ್ತೇನೆ. ಸ್ತ್ರೀಹತ್ಯೆ ಮಾಡುವುದರಲ್ಲಿ ಅರ್ಥವಿಲ್ಲ; ಏನೂ ಫಲವಿಲ್ಲ. ಕಾಪುರುಷರ ಹೊರತು ಮತ್ತೆ ಯಾರೂ ಆ ಕೆಲಸ ಮಾಡಲಾರರು." ಅವನು ಹೇಳಿದ.

"ಲುಯಿಗಿನಿ, ನನ್ನ ಮಾತಿಗೆ ಎದುರು ಹೇಳಬೇಡವೆಂದು ಈ ಮೊದಲೇ ನಿನ್ನನ್ನು ಎಚ್ಚರಿಸಿದ್ದೇನೆ. ಅದನ್ನೆಲ್ಲ ನೀನು ಮರೆತುಬಿಟ್ಟಿದ್ದೀ. ಅನಧಿಕಾರ ಚರ್ಚೆ ಮಾಡುವವರನ್ನು ನಾನೆಂದೂ ಕ್ಷಮಿಸುವುದಿಲ್ಲ."

ಲುಯಿಗಿನಿ ಮೌನವಾಗಿ ಸಿಜಾರೆಯ ಮುಖದ ಕಡೆ ನೋಡಿದ. ಅವನ ದೃಷ್ಟಿ ಅಚಂಚಲ, ಸಂಕೋಚಹೀನ. ಸಿಜಾರೆಯೂ ಅವನ ಮೋರೆಯನ್ನು ನೋಡಿದ, ಅಧೀರತೆ ಅವನ ದೃಷ್ಟಿಯಲ್ಲಿ ಒಡೆದುಮೂಡಿತ್ತು. ಲುಯಿಗಿನಿಯ ಲ್ಲದೆ ಮತ್ತಾರಾದರೂ ಪ್ರತಿವಾದಿಸಿದ್ದರೆ ಅವರನ್ನು ಅವನು ಗುಂಡಿಕ್ಕಿ ಮುಗಿಸು ತ್ತಿದ್ದ. ಆದರೆ ಲುಯಿಗಿನಿ ಅವನ ಬಲಗೈ, ಅವಧ್ಯ. ಲುಯಿಗಿನಿ ಒಡೆಯನ ಮನೋಭಾವವನ್ನರಿತು ಅವಿಚಲಿತ ಸ್ವರದಲ್ಲಿ ಮಾತನಾಡಿದ: "ಒಡೆಯರೆ, ನೀವು, ನನಗೆ ಎಂಥ ಕಠಿನ ಕಾರ್ಯವನ್ನೇ ಒಪ್ಪಿಸಿರಿ, ಎಂಥ ಅಕೃತ್ಯವನ್ನೇ ಒಪ್ಪಿಸಿರಿ ನಾನು ಮಾಡುತ್ತೇನೆ. ಈವರೆಗೆ ನಿಮ್ಮ ಯಾವ ಮಾತನ್ನು ಪಾಲಿ ಸಿಲ್ಲ? ಆದರೆ ನಾರೀಪೀಡನ ನಾರೀಹತ್ಯ ನನ್ನಿಂದಾಗದ ಕೆಲಸ. ನೀವು ಸ್ತ್ರೀಹತ್ಯ ಮಾಡಿದರೆ ಆ ಪಾಪದ ಫಲವನ್ನು ಅನುಭೋಗಿಸಬೇಕಾಗುವುದು. ಈ ಕಾರ್ಯದಲ್ಲಿ ನಿಮಗೆ ಯಾವ ಪುರುಷನ ಸಹಾನುಭೂತಿಯೂ ಸಿಕ್ಕ ಲಿಕ್ಕಿಲ್ಲ."

ಸಿಟ್ಟಿನಿಂದ ಸಿಜಾರೆಯ ಮುಖ ಕೆಂಪಾಯಿತು. ಅವನ ಹಣೆಯ

ಮೇಲಿನ ನರಗಳು ಹಗ್ಗದಂತಿದ್ದವು. ಅವನ ಹಸ್ತಗಳು ಮುಷ್ಟಿಗೆಯಾದವು. ಆದರೆ ಅವನ ಆ ಕ್ರೋಧದಿಂದ ಲುಯಿಗಿನಿ ವಿಚಲಿತನಾಗಲಿಲ್ಲ. ಅವನ ಮುಖ–ನಯನಗಳಲ್ಲಿ ಕೊಂಚವಾದರೂ ಭಯದ ಕುರುಹು ತೋರಲಿಲ್ಲ.

ತುಸು ಹೊತ್ತಿನಲ್ಲಿ ಸಿಜಾರೆಯ ಸಿಟ್ಟು ಕಡಿಮೆಯಾಯಿತು; ಮುಷ್ಟಿಗಳು ಸಡಿಲಾದವು. ಅವನು ಹಿಂದಿರುಗಿ ಪುಂಡರಿಬ್ಬರ ಕಡೆ ನೋಡಿದ; ಅವರು ಕೊಂಚ ದೂರದಲ್ಲಿ ನಿಂತಿದ್ದರು. ಹೆಲ್ಲಗೆ ಮಾತನಾಡಿದ್ದು ಅವರಿಗೆ ಕೇಳಿಸುವ ಸಂಭವವಿರಲಿಲ್ಲ ಸಿಜಾರೆ ಮೃದು ಆದರೆ ದೃಢ ಸ್ವರದಲ್ಲಿ ಮಾತನಾಡಿದ: "ಲುಯಿಗಿನಿ, ನಿನ್ನ ಮಾತುಗಳನ್ನು ಕೇಳಿ, ನನ್ನನ್ನು ನೀನು ತಿರಸ್ಕರಿಸುತ್ತಿದ್ದೀಯೆಂದು ನನಗೆನಿಸುತ್ತದೆ. ಮುಂದೆ ನನ್ನನ್ನು ಮೀರಿಯೂ ಹೋಗಬಹುದು. ನೀನು ಮರೆಯಲ್ಲಿ ನಿಂತು ನನ್ನ ಮಾತನ್ನು ಕೇಳಿದೆ ಎಂದು ನನಗೆ ಗೊತ್ತಾಗಿದ್ದರೆ, ನೀನೀಗ ನಿಂತ ಸ್ಥಳದಲ್ಲಿಯೇ ಗುಂಡಿಕ್ಕಿ ಕೊಲ್ಲುತ್ತಿದ್ದೆ. ಯಾವ ಅನುಚರನೇ ಆಗಲಿ–ಅವನೆಷ್ಟೇ ನನ್ನ ಪ್ರೀತಿಯವನಾಗಿರಲಿ–ನನ್ನ ವ್ಯವಸ್ಥೆಯಂತೆ ನಡೆಯದೆ ನಿಯಮಭಂಗ ಮಾಡಿದರೆ ಕಠೋರವಾಗಿ ದಂಡಿಸುತ್ತೇನೆ. –ನಾನು ಹೇಳುವುದು ತಿಳಿಯಿತೆ?"

ಲುಯಿಗಿನಿ ನಕ್ಕು ಉತ್ತರವಿತ್ತ: "ಇದಕ್ಕಿಂತ ತಿಳಿಯಲಾರದ ಮಾತೂ ತಿಳಿಯುತ್ತದೆ, ಇದು ತಿಳಿಯುವುದಿಲ್ಲವೆ? ನನ್ನನ್ನು ಅಷ್ಟು ಹೆಡ್ಡನೆಂದು ತಿಳಿಯಲು ಕಾರಣವೇನು ಒಡೆಯರೇ? –ಅನೇಕ ಗುಂಪಿನ ಕಳ್ಳರು ನನಗೇನೆಂದು ಹೆಸರಿಟ್ಟಿದ್ದಾರೆ ಬಲ್ಲಿರಾ? 'ಬೆಕ್ಕು!'—ಅವರು ನನ್ನನ್ನು ಕೊಲ್ಲಲು ಬೇಕಾದಷ್ಟು ಪ್ರಯತ್ನಿಸಿದರು, ಸಾಧ್ಯವಾಗಲಿಲ್ಲ; ಬೆಕ್ಕಿಗೆ ಪ್ರಾಣಗಳು ಒಂಬತ್ತಂತೆ. ನನಗೂ ಅಷ್ಟೇ ಇದ್ದಿರಬಹುದು ಒಂಬತ್ತರಲ್ಲಿ ಕೆಲವು ಪ್ರಾಣಗಳನ್ನು ನಿಮ್ಮ ಕೆಲಸಕ್ಕಾಗಿ ಕೊಟ್ಟಿದ್ದೇನೆ, ಆದರೆ ಈ ದೇಹದಲ್ಲಿ ಇನ್ನೂ ಎಷ್ಟೋ ಪ್ರಾಣಗಳಿವೆ. ತಿಳಿಯಿತೆ? ಈ ಮಾತು ಮರೆಯಬೇಡಿ ಒಡೆಯರೆ! ಸಹಜವಾಗಿ ಸಾಯುವವನಲ್ಲ ನಾನು."

ಸಿಜಾರೆ ಚುರುಟನ್ನು ಬಾಯಲ್ಲಿಟ್ಟು ಒಂದೆರಡು ಜುರಿ ಜೋರಾಗಿ ಎಳೆದ. ಬಲವಾದ ಆ ಉಸಿರೆಳೆತದಿಂದ, ಚುರೂಟಿನ ಬೆಂಕಿ ಅವನ ಕಣ್ಬೆಂಕಿಯಂತೆಯೇ ಭುಗ್ಗೆಂದಿತು. ಧೂಮಪಾನದಿಂದ ಅವನ ಮನಸು ಕೊಂಚ ಸ್ಥಿಮಿತಕ್ಕೆ ಬಂದಂತಾಯಿತು. ಲುಯಿಗಿನಿಯ ಮಾತಿನಿಂದ ಎಷ್ಟೋ ಸಲ

ಅವನ ತಲೆ ತಿರುಗುತ್ತಿದ್ದಿತು; ಆದರೆ ಅವನು ಸಿಟ್ಟನ್ನು ಹತೋಟಿಗೆ ತಂದು ಕೊಳ್ಳಬೇಕಾಗುತ್ತಿತ್ತು. ಲುಯಿಗಿನಿಯನ್ನು ಬಿಟ್ಟರೆ ಅವನ ಕೆಲಸ ನಡೆಯುತ್ತಿರಲಿಲ್ಲ.

ಲುಯಿಗಿನಿ ಹುಟ್ಟಿದ್ದು ನ್ಯೂಯಾರ್ಕಿನಲ್ಲಿ. ಅವನು ಅಮೇರಿಕನ್ನರ ಬುದ್ಧಿವಂತಿಕೆಯನ್ನೂ ಇಟಾಲಿಯನ್ನರ ಚಾತುರ್ಯವನ್ನೂ ಲಂಡನಿನಲ್ಲಿದ್ದು ಆಂಗ್ಲರ ಸ್ವಭಾವಸಿದ್ಧ ದೃಢತೆಯನ್ನೂ ಮೈಗೂಡಿಸಿಕೊಂಡಿದ್ದ ಅವನು ಪ್ರತಿಯೊಂದು ವಿಷಯದ ಇಬ್ಬದಿಗಳನ್ನೂ ನೋಡುತ್ತಿದ್ದ. ನಾನಾಪ್ರಕಾರದ ಅಭಿರುಚಿಯ ವಿವಿಧ ಪ್ರಕೃತಿಯ ಜನರ ಸಂಪರ್ಕದಿಂದ ಮತ್ತು ಪ್ರತಿಕೂಲ ಘಟನೆಗಳ ಘಾತ ಪ್ರತಿಘಾತಗಳಿಂದ ಅಲ್ಪ ವಯಸ್ಸಿನಲ್ಲಿಯೇ ವಿಶೇಷ ಅಭಿಜ್ಞತೆಯನ್ನು ಅವನು ಸಂಪಾದಿಸಿದ್ದ. ಸಾಹಸದಲ್ಲಿಯೂ, ದೃಢಚಿತ್ತದಲ್ಲಿಯೂ ಅವನು ಸಿಜಾರೆಗೆ ಕಡಿಮೆಯಿರಲಿಲ್ಲ. ಸಿಜಾರೆ ಎಷ್ಟೋ ಪ್ರಯತ್ನಮಾಡಿಯೂ ಅವನ ಹೃದಯ ರಹಸ್ಯವನ್ನು ಭೇದಿಸಲು ಸಮರ್ಥನಾಗಲಿಲ್ಲ. ಸಿಜಾರೆಯಿಂದ ಅವನಿಗೆ ವೇತನವಾಗಲಿ ಪುರಸ್ಕಾರವಾಗಲಿ ಸಾಕಷ್ಟು ಸಿಕ್ಕದಿದ್ದರೂ ಲುಯಿಗಿನಿ ಅವನಿಗಾಗಿ ಯಾವ ಅಪಕರ್ಮವನ್ನು ಮಾಡುವುದಕ್ಕೂ ಹಿಂಜರಿಯುತ್ತಿರಲಿಲ್ಲ. ಅವನಷ್ಟು ನಿರ್ಭೀತ ಅನುಚರ ಮತ್ತೊಬ್ಬನಿಲ್ಲವೆಂಬುದು ಸಿಜಾರೆಗೂ ಗೊತ್ತು.

ಸಿಜಾರೆ ಕ್ರುದ್ಧ ದೃಷ್ಟಿಯಿಂದ ಅವನನ್ನು ದಿಟ್ಟಿಸುತ್ತ ಮುಂದೇನು ಮಾಡಬೇಕೆಂದು ಯೋಚಿಸುತ್ತಿದ್ದ. ಆಗ ಲುಯಿಗಿನಿ ಜೇಬಿನಿಂದ ಸಣ್ಣ ಚೂರಿಯೊಂದನ್ನು ತೆಗೆದು ಅದರಿಂದ ತನ್ನ ಉಗುರುಗಳನ್ನು ತೆಗೆಯ ತೊಡಗಿದ.

ಅವನ ಬೆರಳುಗಳು ರಮಣಿಯರ ಬೆರಳುಗಳಂತೆ ಸೀರಾಗಿ ಕೋಮಲವಾಗಿದ್ದರೂ ಅವುಗಳಲ್ಲಿ ಹಿಡಿದ ಪಿಸ್ತೂಲಿನ ಗುರಿ ಮಾತ್ರ ತಪ್ಪದ ಗುರಿ. ಪಿಸ್ತೂಲಿನಿಂದ ಅವನು ಎಷ್ಟು ಜನರನ್ನು ಕೊಂದಿದ್ದಾನೆಯೋ, ಅದರ ಅಂದಾಜು ಕಟ್ಟುವುದು ಯಾರಿಗೂ ಸಾಧ್ಯವಿರಲಿಲ್ಲ. ಎಣಿಸಿದರೆ ಮುಗಿಯದಷ್ಟೆಂದು ಅವನೇ ಹೇಳುತ್ತಾನೆ. ಮೇಲಿನವನು 'ಫಾಯರ್' ಎನ್ನುವುದೇ ತಡ, ಅವನು ಗುಂಡಿಕ್ಕಿ ನರಹತ್ಯೆ ಮಾಡುತ್ತಲಿದ್ದ;—ಅವರು ಯಾರು? ತಂದೆಯೋ ಒಡಹುಟ್ಟಿದವನೋ ಹೊಟ್ಟೆಯಲ್ಲಿ ಹುಟ್ಟಿದ ಮಗನೋ ಎಂಬುದನ್ನು

ನೋಡುತ್ತಿರಲಿಲ್ಲ. ಸಿಜಾರೆಯ ಅಪ್ಪಣೆಯನ್ನು ಈ ರೀತಿ ಪಾಲಿಸಿಕೊಂಡು ಬರುತ್ತಿದ್ದ. ಮನುಷ್ಯರ ಎದೆಗೆ ಗುಂಡು ಹೊಡೆಯುವುದೆಂದರೆ, ತನ್ನ ಹಲ್ಲಿಗೆ ಟೂಥ್‌ಬ್ರಶ್ ಉಪಯೋಗಿಸುವಷ್ಟು ಸಹಜವಾಗಿತ್ತು ಅವನಿಗೆ.

ಮುತ್ತು ರತ್ನಗಳಲ್ಲಿ ಅವನಿಗೆ ಬಹು ಪ್ರೀತಿ, ಲೋಭ. ಇದೇ ಅವನಲ್ಲಿದ್ದ ದೌರ್ಬಲ್ಯ. ನಾರೀ ಸ್ವಭಾವದ ಕೆಲ ವೈಶಿಷ್ಟ್ಯಗಳೂ ಅವನ ಚರಿತ್ರೆಯಲ್ಲಿ ಕಂಡುಬರುತ್ತಿದ್ದವು. ಆದರೆ, ಕೆಲ ಕೆಲವರೊಂದಿಗೆ ಒಂದೇ ಮೇಜಿಗೆ ಕುಳಿತು ಬಂಧುಭಾವದಿಂದ ಊಟ ಮಾಡುತ್ತ ಮಾಡುತ್ತ ಸ್ವಲ್ಪವೂ ಉತ್ತೇಜನವಿಲ್ಲದೆ, ಬಿಂದು ಮಾತ್ರವೂ ವಿಚಲಿತನಾಗದೆ ಅವರೆದೆಗೆ ಗುಂಡಿಕ್ಕಿದ್ದೂ ಉಂಟು. ದನಿಯನ್ನು ನಾನಾ ವಿಧವಾಗಿ ಬದಲಿಸುವ ಕಲೆಯನ್ನೂ ಅವನು ಚೆನ್ನಾಗಿ ಸಾಧಿಸಿಕೊಂಡಿದ್ದಾನೆ.

ಸಿಜಾರೆಯಿಂದಾಗದ ಕೆಲಸವನ್ನು ಲುಯಿಗಿನಿ ಸಹಜವಾಗಿ ಈಡೇರಿಸುತ್ತಿದ್ದ. ಅದಕ್ಕಾಗಿಯೇ ಸಿಜಾರೆಗೆ ಅವನ ಅಗತ್ಯವಿತ್ತು. ಅವರ ಜೀವ ಎಷ್ಟು ಬೆಲೆಯುಳ್ಳದ್ದೆಂಬುದು ಸಿಜಾರೆಗೆ ಗೊತ್ತಿತ್ತು; ಅಂತೆಯೇ ಅವನ ಧಾರ್ಷ್ಟ್ಯವನ್ನು ದುರ್ಲಕ್ಷಿಸುತ್ತಿದ್ದ.

ಲುಯಿಗಿನಿ ಚೂರಿಯಿಂದ ಉಗುರು ತೆಗೆಯುತ್ತ ಓರೆನೋಟದಿಂದ ಇಲಿನ ಕಡೆಗೆ ನೋಡುತ್ತಿದ್ದ. ಆಗ ಅವನ ಮನಸ್ಸಿನಲ್ಲಿ ಏನು ವಿಚಾರ ನಡೆದಿತ್ತೊ ಹೇಳುವುದು ಕಠಿಣ. ಅವನ ಮೋರೆ ನೋಡಿ ಮನ ಅರಿತುಕೊಳ್ಳುವುದು ಯಾರಿಗೂ ಅಸಾಧ್ಯ.

ಕೆಲ ಹೊತ್ತು ಅವನ ಮುಖವನ್ನು ದಿಟ್ಟಿಸಿ ನೋಡಿ ಸಿಜಾರೆ ನೀರಸ ಸ್ವರದಲ್ಲಿ ಮಾತನಾಡಿದ: "ಲುಯಿಗಿನಿ, ನಿನ್ನ ದೇಹದಲ್ಲಿ ಇನ್ನೂ ಎಷ್ಟು ಪ್ರಾಣಗಳು ಬಾಕಿಯಿವೆ ಎಂಬುದನ್ನು ಪರೀಕ್ಷಿಸಲು ನನ್ನನ್ನು ಉತ್ತೇಜಿಸಬೇಡ. ಸ್ಕಾರ್ಲೇಟಿಯ ಭಾಗ್ಯದಲ್ಲಿ ಏನು ಘಟಿಸಿತೆಂಬುದನ್ನು ನೀನು ಬಲ್ಲೆ; ನನ್ನ ಸಂಕಲ್ಪಕ್ಕೆ ಅಡ್ಡಬರುವವರ ಗತಿ ಏನಾಗುವುದೆಂಬುದು ನಿನಗೆ ಗೊತ್ತಿದೆ."

"ನಾನೇ ನಿಮ್ಮ ಕೈಯೊಳಗಿನ ಅಸ್ತ್ರ. ಅದೆಲ್ಲ ನನಗೆ ತಿಳಿಯದಿದ್ದರೆ ಮತ್ತಾರಿಗೆ ತಿಳಿಯಬೇಕು? ಅಲ್ಲದೆ, ನಿಮ್ಮ ಆದೇಶದಂತೆ ಸ್ಕಾರ್ಲೇಟಿಯನ್ನು ಕೊನೆಗಾಣಿಸಿ ಬಂದವನು ನಾನೇ, ನನಗವನ್ನೆಲ್ಲ ಹೇಳಬೇಕೆ? ಆದರೆ ಯಾವ

ಅಪರಾಧಕ್ಕಾಗಿ ಅವನಿಗೀ ಶಿಕ್ಷೆ ಎಂಬುದು ಮಾತ್ರ ನನಗೆ ತಿಳಿಯಲಿಲ್ಲ; ತಿಳಿದುಕೊಳ್ಳುವ ಇಚ್ಛೆಯೂ ಇಲ್ಲ. ನಿಮ್ಮ ಅಪ್ಪಣೆಯನ್ನು ನಡೆಸುವುದೇ ನನ್ನ ಕೆಲಸ.''

"ಯಾವ ತಪ್ಪಿಗಾಗಿ ಸ್ಕಾರ್ಲೆಟಿಗೆ ಮರಣದಂಡನೆಯಾಯಿತೆಂಬುದನ್ನು ನಿನ್ನೆದುರು ಹೇಳಲು ಅಭ್ಯಂತರವಿಲ್ಲ ಅವನಿಗೊಂದು ಕೆಲಸ ಒಪ್ಪಿಸಿದ್ದೆ; ಅದಕ್ಕಾಗಿ ಅವನಲ್ಲೇ ಭರವಸೆಯಿಟ್ಟಿದ್ದೆ. ಪೋಲಿಸರು ಇದರ ಸುಳಿವು ಹಿಡಿದು ಅವನನ್ನು ಎಳೆದಾಡಿ ಬಂಧನದ ಬೆದರಿಕೆ ಹಾಕಿದರು. ಪೋಲಿಸರ ಭಯದಿಂದ ಅವನು ಊಟ ನಿದ್ದೆ ತೊರೆದು, ಕೊನೆಗೆ ಅಂಗಡಿಯನ್ನು ಮಾರಿ ದೇಶತ್ಯಾಗ ಮಾಡಿದನು. ಆ ಅಂಗಡಿ ಅನ್ಯರ ಕೈಸೇರಿದರೆ ನಮಗೆ ತೊಂದರೆಯಾಗುವುದೆಂಬುದು ಅವನಿಗೆ ಗೊತ್ತಿತ್ತು; ಆದರೂ ಅವನು ನನ್ನನ್ನು ವಿಚಾರಿಸದೆ ಅಂಗಡಿಯನ್ನು ಮಾರಿ ಹೊರಟುಹೋದನು. ಅವನ ಈ ಧಾರ್ಷ್ಟ್ಯ ಅಕ್ಷಮ್ಯ. ಈ ಅಪರಾಧಕ್ಕಾಗಿ ಮರಣ ಶಿಕ್ಷೆ ವಿಧಿಸಿದ್ದು."

"ತಿಳಿಯಿತು. ಇದಕ್ಕಾಗಿಯೇ ಅಭಿಜ್ಞಾನದ ಸಂಖ್ಯೆ, ೨೬."

"ಬುದ್ಧಿವಂತ! ನನ್ನ ಮನದ ಇಂಗಿತ ನಿನಗೆ ತಿಳಿಯುತ್ತದೆಯೇ? ಏನೋ ಒಂದು ಜಾಳಿಗೆ ಹೆಣೆದು ಈ ಕಾರ್ಯದಲ್ಲಿ ಕೈ ಹಾಕಿದ್ದೇನೆ. ಅದು ಯಶಸ್ವಿಯಾಗದೆ ಹೋಗುವುದಿಲ್ಲ; ಅದನ್ನು ಯಾರೂ ತಡೆಯಲಾರರು. ನಾನೊಂದು ಸಂಕಲ್ಪ ಮಾಡಿದೆನೆಂದರೆ ತಪ್ಪುವ ಹಾಗೇ ಇಲ್ಲ. ಆ ದೈವಗೇಡಿ ತನ್ನ ಸೊಟ್ಟ ಅಂಗಡಿಯನ್ನು ಮಾರಿದರೆ ಅದು ವ್ಯರ್ಥವಾಗುವುದೆಂದು ಬಗೆದಿದ್ದರೆ ಶುದ್ಧ ತಪ್ಪು. ಏಕೆಂದರೆ, ಆ ವ್ಯವಹಾರವೇ ದುರ್ಭೇದ್ಯ ರಹಸ್ಯಮಯ; ಅದನ್ನು ಭೇದಿಸಲೆಂದು ಬಂದ ತುಬ್ಬುಗಾರ ಬ್ಲೇಕನಿಗೂ ಒಂದೆಳೆ ಸಿಕ್ಕಿಲ್ಲ."

ಸಿಜಾರೆಯ ಮಾತು ಕೇಳಿ ಲುಯಿಗಿನಿ ಬೆಚ್ಚಿದನು. ''ಯಾರು? ತುಬ್ಬುಗಾರ ಬ್ಲೇಕ್! ಈ ಕಾರ್ಯದಲ್ಲಿ ಹಸ್ತಕ್ಷೇಪ ಮಾಡಲು ಅವನೇಕೆ ಬಂದ?'' ಎಂದು ವಿಚಲಿತ ಸ್ವರದಲ್ಲಿ ಕೇಳಿದ.

"ಇನ್ನೂ ನನಗದು ಗೊತ್ತಾಗಿಲ್ಲ; ಮುಂದೆ ತಿಳಿದೀತು. ತಿಳಿದುಕೊಳ್ಳುವ ಉಪಾಯವನ್ನೂ ಗೊತ್ತುಮಾಡಿದ್ದೇನೆ. ಅವನ ಆವಿರ್ಭಾವವು ಪೂರ್ಣ ಆಕಸ್ಮಿಕವಿರಲೂ ಬಹುದು. ಈ ನಂಬರುಗಳು ಯಾರ ಹತ್ತಿರ ಇವೆಯೋ ಅವರ

ಬ್ಲೊಬ್ಬರ ಮೇಲೆ ಈ ತರುಣಿ ಆಕ್ರಮಣ ಮಾಡಿದ್ದಳು ಆಮೇಲೆ ಇಂದು ರಾತ್ರಿ ಇವಳು ಬ್ಲೇಕನೊಂದಿಗೆ ಆಡ್ಡಾಡುತ್ತಿದ್ದಳು.

ಲುಯಿಗಿನಿ ಲಲಾಟವನ್ನು ಆಕುಂಚಿತಗೊಳಿಸಿ ಹೇಳಿದ: “ಬ್ಲೇಕನನ್ನು ತಡವುವದೆಂದರೆ ಹಾವಿನ ಹೆಡೆ ಹಿಡಿದ ಹಾಗೆ. ಮಹಾಭಯಂಕರ ಮನುಷ್ಯ, ಮಹಾವಿಪತ್ಕಾರಿ. ನೀವು ಅವನನ್ನು ತಡವಬೇಡಿರಿ”

“ಲುಯಿಗಿನಿ, ನಿಮ್ಮ ಮೇಲೆ ಭರವಸೆಯಿಟ್ಟವರಿಂದ ವಿಮುಖರಾಗುವುದು, ಅವರನ್ನು ಸಹಾಯದಿಂದ ವಂಚಿತರನ್ನಾಗಿ ಮಾಡುವುದು ಅದಕ್ಕಿಂತ ವಿಪತ್ಕಾರಿ. ನಾನು ಅವರನ್ನು ಅಂಗೀಕರಿಸಿ ಭರವಸೆ ಕೊಟ್ಟಿದ್ದೇನೆ. ಭವಿಷ್ಯತ್ತಿನ ಕಡೆ ದೃಷ್ಟಿಯಿಟ್ಟು ನಾನು ಕೆಲಸಮಾಡುತ್ತೇನೆ. ಇದರಲ್ಲಿ ಕೃತಕಾರ್ಯನಾದರೆ, ಉಪಯುಕ್ತ ಜನರ ಒಂದು ಗುಂಪು ನಮ್ಮ ವಶವಾಗುವುದು;— ಹಾಗಾಗುವ ಸಂಭವ ತುಂಬಾ ಇದೆ. ಅವರು ಸಾಯುವ ವರೆಗೆ ನಮ್ಮ ಋಣದಲ್ಲಿರುವರು ಬುಲ್‌ಡಾಗ್ ಎಂಬ ಅಜೇಯ ಚೋರದಲವನ್ನು ನಾಮಶೇಷಗೊಳಿಸಿಬಿಡುತ್ತೇನೆ.”

“ಎಲ್ಲ ಶತ್ರುಗಳನ್ನು ತಲೆಬಾಗಿಸಿ ನೀವು ಸಾರ್ವಭೌಮರೇ ಆಗಬಲ್ಲಿರಿ; ಅಪ್ರತಿಹತ ಶಕ್ತಿಯ ಅಧಿಕಾರಿಗಳಾಗಬಲ್ಲಿರಿ.”

“ಹಾ., ಹಾಗೆಯೇ ಆಗುವುದು. ಎಲ್ಲರೂ ನನಗೆ ದಸ್ಯು—ಸಮ್ರಾಜನೆಂದು ವಂದಿಸುವರು. ಪ್ರಾಚೀನ ಯುಗದ ವೀರಕೇಸರಿ ಸಿಜಾರೆಯ ಆತ್ಮವು ನನ್ನ ದೇಹದಲ್ಲಿ ಅಧಿಷ್ಠಿತವಾಗಿರುವಂತೆ ನನಗನುಭವವಾಗುವುದು. ಆದರೆ ಅವರ ಸನ್ಮಾನದಲ್ಲಿ ತೃಪ್ತಿಯೆನಿಸದು. ನನಗದರಿಂದ ಸಂಕೋಚವೆನಿಸುವುದು, ಅದು ಅಭಿಮಾನಕ್ಕೆ ಕಡಿಮೆ; ಅವರು ನನ್ನನ್ನು ನಗೆಯಾಡುವರೆಂದು ಬಗೆಯುತ್ತೇನೆ. ನಾನೀಗ ಇಡೀ ದೇಶದ ದಸ್ಯುಪ್ರಪಂಚದ ಅಧಿಸತ್ಯ ಪಡೆದಿಲ್ಲ; ಎಲ್ಲರೂ ನನ್ನ ಸಲಹೆ ಸೂಚನೆಗಳಂತೆ ನಡೆಯುವವರಾಗಿಲ್ಲ. ದಸ್ಯುಸಮ್ರಾಜನೆನಿಸಿಕೊಳ್ಳುವ ಅಧಿಕಾರ ನನಗಿನ್ನೂ ಎಲ್ಲಿದೆ? ನಾನು ಬ್ಲೇಕನ ಗುಪ್ತ ರಹಸ್ಯವನ್ನು ತಿಳಿದುಕೊಳ್ಳಲು ಇಚ್ಛಿಸುತ್ತೇನೆ; ಈ ಯುವತಿಯ ಮನೋಗತವನ್ನು ಅರಿತುಕೊಳ್ಳಬೇಕಾಗಿದೆ. ಯಾವ ಉಪಾಯದಿಂದಲಾದರೂ ಅದನ್ನು ನುಡಿಸಲೇಬೇಕು.”

ಎಂದು ನುಡಿದು ಆ ನರಪಶು ಸಿಜಾರೆ ಇಲಿನಳ ಕಡೆ ಕ್ರುದ್ಧ ದೃಷ್ಟಿ

ಯನ್ನೆಸೆದ. ಅವನ ಬಾಯೊಳಗಿನ ಚುರೂಟು ಮತ್ತೆ ನಿಗಿನಿಗಿಯಾಯಿತು. ಇಲಿನಳನ್ನು ಕಚ್ಚುವನೋ ಎಂಬಂತೆ ಕರಡಿಯ ಹಾಗೆ ಹಲ್ಲು ತೆಗೆದ. ಅವನ ಆ ಉಜ್ವಲ ನೇತ್ರಗಳ ಪ್ರಖರ ದೃಷ್ಟಿಪಾತದಿಂದ ಇಲಿನಳು ಬೆದರಿದಳು. ಭಯಂಕರವಾದ ಹೆಬ್ಬಾವಿನ ನಿರ್ನಿಮೇಷ ದೃಷ್ಟಿಯಿಂದ ಬೇಟೆಯ ಪ್ರಾಣಿಗಳು ಮೋಹಾಚ್ಛನ್ನವಾಗಿ ನಿಶ್ಚೇಷ್ಟವಾಗುವಂತೆ ಅಸಹಾಯಳಾದ ಇಲಿನಳ ಸ್ಥಿತಿಯಾಯಿತು.

ಅದೇ ಸಮಯಕ್ಕೆ ಬಾಗಿಲು ಮತ್ತೆ ತೆರೆಯಿತು. ಈಗ ಬಂದವಳು ಒಬ್ಬ ಯುವತಿ. ನಡೆದಾಡುವ ಬಳ್ಳಿಯಂತೆ ಬಳುಕುತ್ತ ಅವಳು ಕೋಣೆಯನ್ನು ಪ್ರವೇಶಿಸಿದಳು. ದೀರ್ಘಾಂಗಿಯಾದ ಸುಂದರಿಯ ಉನ್ನತ ವಕ್ಷಃಸ್ಥಳವು ಹೆಜ್ಜೆಹೆಜ್ಜೆಗೂ ಅದಿರುತ್ತಿತ್ತು ಮೈಬಣ್ಣ ಹಾಲಿನ ಕೆನೆಯಂತೆ ಶುಭ್ರ; ಕೂದಲು ಮೃದು, ದಟ್ಟಗಪ್ಪು; ಅಂದವಾದ ಬೆಲೆಯುಳ್ಳ ಗೌನು ಹೊದೆದಿದ್ದಳು. ಯಾವನೋ ಇಟಾಲಿಯನ್ ಶಿಲ್ಪಿ ಕಡೆದ ಶುಭ್ರ ಅಮೃತ ಶಿಲಾಮೂರ್ತಿಯೋ ಎಂಬಂತಿದ್ದಳು. ಅವಳು ಬಂದು ಮೊದಲು ಸಿಜಾರೆಯ ಕಡೆ ನೋಡಿದಳು; ಮರುಕ್ಷಣದಲ್ಲಿ ತನ್ನ ಸಮೀಪದಲ್ಲಿದ್ದ ಇಲಿನಳನ್ನು ಕಂಡಳು. ತತ್ ಕ್ಷಣವೇ ಅವಳು ಹಸಿದ ಹುಲಿಯಂತೆ ಗರ್ಜಿಸಿ, ಬಂಧಿತಳಾದ ಆತ್ಮರಕ್ಷಣೆಗೆ ಅಸಮರ್ಥಳಾದ ಆ ಯುವತಿಯ ಮೇಲೆರಗಲು ಭರದಿಂದ ಆಕಡೆ ಸಾಗಿದಳು. ಅಪೂರ್ವ ಸುಂದರಿಯಾದ ಆ ತನ್ವಂಗಿಯ ಕ್ರೋಧದಿಂದ ಸ್ಫುರಿಸುವ ಅಧರ, ಅವಳ ಅರುಣರಾಗರಂಜಿತ ನೇತ್ರಗಳು ರೂಪದ ಪ್ರಭೆಯನ್ನು ಮ್ಲಾನಗೊಳಿಸಿದವು.

ಆದರೆ ಸಿಜಾರೆ ಅವಳನ್ನು ಆಕ್ರಮಣಮಾಡಗೊಡಲಿಲ್ಲ. ಅವಳು ಎರಡೂ ಕೈಗಳನ್ನು ಇಲಿನಳನ್ನು ಹಿಡಿಯಲು ಚಾಚುವಷ್ಟರಲ್ಲಿ, ಸಿಜಾರೆ ಅವಳನ್ನು ಅಮಾತ ಎತ್ತಿ ಬೇರೆಡೆಗೊಯ್ದನು. ಬಳಿಕ ಕೋಮಲ ದೃಷ್ಟಿಯಿಂದ ಅವಳ ಮೊಗವನ್ನು ನೋಡುತ್ತ, "ಸಿಯೂರಾ, ನೀನೇಕೆ ಅವಳನ್ನು ಆಕ್ರಮಿಸಲು ಉದ್ಯುಕ್ತಳಾದೆ? ನಾನು ಹಿಡಿದು ಬಂಧಿಸಿಟ್ಟವಳ ಮೇಲೆ ಕೈಮಾಡಲು ನಿನಗೇನಧಿಕಾರವಿಲ್ಲ. ನನ್ನ ಅನುಮತಿಯಿಲ್ಲದೆ ನೀನೇಕೆ ಅವಳನ್ನು ಮುಟ್ಟುವೆ? ನನಗೆ ಯುಕ್ತ ಕಂಡುದನ್ನು ನಾನು ಮಾಡುತ್ತೇನೆ." ಎಂದು ನುಡಿದನು.

ಸಿಯೂರಾ ಕೊಸರಿಕೊಂಡು ಸಿಜಾರೆಯ ಕೈಯಿಂದ ಬಿಡುಗಡೆ ಹೊಂದಿ,

ಅಂಗೈ ಉಜ್ಜಿಕೊಳ್ಳುತ್ತ ಉರಿಗಣ್ಣಿನಿಂದ ಇಲಿನಳ ಮೋರೆ ನೋಡತೊಡಗಿದಳು. ಅವಳ ಭಾವಭಂಗಿ, ತಡೆಯುಂಟಾಗದಿದ್ದರೆ ಇಲಿನಳ ಕೊರಳನ್ನು ಕಚ್ಚಿ ಹರಿದು ತಿನ್ನುತ್ತಿದ್ದಳೇನೋ ಎಂಬಂತಿತ್ತು. ಕ್ರೋಧದಿಂದ ಅವಳ ಮೈಯೆಲ್ಲ ಥರಗುಟ್ಟುತ್ತಿತ್ತು. ತೇಕುತ್ತ ತೇಕುತ್ತ ವಿಕೃತ ಸ್ವರದಲ್ಲಿ ಸಿಜಾರೆಯನ್ನು ಕುರಿತು ಅವಳೆಂದಳು: "ಕುರ್ಟಿನ್ ಸಂಕೇತ ಚಿಹ್ನವನ್ನು ಕಳೆದುಕೊಂಡಿದ್ದಾಳೆ. ಅದನ್ನು ಈ ಸರ್ವನಾಶಿನಿ ಕಸಿದುಕೊಂಡಿದ್ದಾಳೆ."

ಅದನ್ನು ಕೇಳಿ ಸಿಜಾರೆ ಉತ್ತೇಜಿತ ಸ್ವರದಲ್ಲಿ: "ಹೀಗೋ! ಇಷ್ಟು ಸಾಹಸವೋ ಇವಳದು? ನನಗಿದು ಗೊತ್ತೇ ಇರಲಿಲ್ಲ. ವಾಸ್ತವ ಸಂಗತಿ ಈಗ ಸ್ವಲ್ಪ ಸ್ವಲ್ಪ ತಿಳಿಯತೊಡಗಿತು; ಕತ್ತಲಲ್ಲಿ ಬೆಳಕಿನ ಕಿರಣ ಕಾಣುತ್ತಿದ್ದೇನೆ."

ಸಿಯಾರಾ ಹೇಳಿದಳು: "ಪಿತ್ರೋ ಮತ್ತು ಬೆಪ್ಪೋ ಇಬ್ಬರೂ ಬಂದಿದ್ದಾರೆ. ಬ್ಲೇಕ್ ಮರಿಸನ ಅಂಗಡಿಯಲ್ಲಿ ಕುಳಿತಿದ್ದನಂತೆ; ಬೆಪ್ಪೋ ಅಂಗಡಿಯ ಕಿಡಿಕಿಯೊಳಗಿಂದ ನೋಡಿದನಂತೆ; ಬ್ಲೇಕನ ಗುರುತು ಅವನಿಗೆ ಸರಿಯಾಗಿ ಹತ್ತಿದೆಯಂತೆ." ಅವಳ ಮಾತಿನ ಆಘಾತ ಅಮೇರಿಕನ್ನರಂತೆ ಇತ್ತು.

ಈ ಮಾತನ್ನು ಕೇಳಿ ಸಿಜಾರೆ ಚಿಂತಾಕುಲಚಿತ್ತದಿಂದ ಕೈಗಳನ್ನು ಹಿಂದೆ ಕಟ್ಟಿಕೊಂಡು ಕೋಣೆಯಲ್ಲಿ ಎಡೆಯಾಡತೊಡಗಿದ. ಸ್ವಲ್ಪ ಹೊತ್ತಿನ ತರುವಾಯ ಅವನು ಸಿಯಾರಾಳ ಎದುರಿನಲ್ಲಿ ಪಕ್ಕನೆ ನಿಂತು ಅಸ್ಫುಟ ಸ್ವರದಲ್ಲಿ ಮಾತನಾಡಿದ. "ನಾನು ನಿಃಸಂದೇಹನಾಗುತ್ತಿದ್ದರೆ–"

ಅವನ ಮಾತು ಪೂರೈಸುವ ಮೊದಲೆ ಸಿಯಾರಾ ಒಂದು ಸಣ್ಣ ಕೈಚೀಲವನ್ನು ದಪ್ಪೆಂದು ಮೇಜಿನಮೇಲೆಸೆದಳು. ಯಾವಳೋ ಮಹಿಳೆಯ ಕೈಚೀಲವದು. "ಈ ಸರ್ವನಾಶಿನಿಯದೇ ಇದು" ಎಂದು ಇಲಿನಳ ಕಡೆ ಬೆರಳು ಮಾಡಿ ಮುಂದುವರಿಸಿದಳು: "ಪೋಲಿಸರು ಇವಳನ್ನು ಹಿಡಿದೊಯ್ದ ಸಮಯದಲ್ಲಿ ಮುರಾಟೆಯ ನೃತ್ಯಮಂದಿರದಲ್ಲಿ ಇದನ್ನಿವಳು ಬಿಸುಟಿ ಹೋದಳು. ನಾನು ಇದರಲ್ಲಿ ಹುಡುಕಿ ನೋಡಿದೆ–ಅಭಿಜ್ಞಾನ ಪದಕ ಇರಲಿಲ್ಲ. ಅದನ್ನಿವಳು ಬ್ಯಾಗಿನಲ್ಲಿಟ್ಟಿಲ್ಲ; ಎಲ್ಲಿಟ್ಟಿದ್ದಾಳೋ ಏನೋ."

ಸಿಜಾರೆ ಎರಡೂ ಕೈಗಳಿಂದ ಕಣ್ಣುತಿಕ್ಕಿಕೊಂಡು ನೀಟಾಗಿ ನಿಂತನು. "ಮತ್ತೆಲ್ಲಿ ಇಡುತ್ತಾಳೆ; ಪೋಷಾಕಿನಲ್ಲಿಟ್ಟಿರಬೇಕು, ಇಲ್ಲವಾದರೆ ಕಾಲುಚೀಲ

ದಲ್ಲಿ ಅಥವಾ ಬೂಟಿನೊಳಗೆ. ತಲೆಯ ಕೂದಲೊಳಗೆ ಸಿಕ್ಕಿಸಿಕೊಂಡಿದ್ದರೂ ಇರಬಹುದು. ನೀನು ಇವಳ ಉಡಿಗೆ ತೊಡಿಗೆ, ಪ್ರತಿಯೊಂದು ಅಂಗಗಳನ್ನು ಶೋಧಿಸಿದರೆ ತಾನೇ ಹೊರಬೀಳುತ್ತದೆ. ಎಲ್ಲೆಲ್ಲಿ ಹೇಗೆ ಹೇಗೆ ಶೋಧಿಸ ಬೇಕೆಂಬುದನ್ನು ನಿನಗೇನು ಹೇಳಬೇಕಾಗಿಲ್ಲ. ನೀನೇನೂ ಮುಳ್ಳು ಕೂಸಲ್ಲ" ಅರ್ಥಪೂರ್ಣ ದೃಷ್ಟಿಯಿಂದ ಸಿಯಾರಾಳ ಮುಖ ನೋಡುತ್ತ ಅವನು ಅತಿ ಮೃದು ಸ್ವರದಲ್ಲಿ ಕೊನೆಯ ಮಾತನ್ನಾಡಿದನು. ಸ್ವಲ್ಪ ಹೊತ್ತು ಯೋಚಿಸಿ ಕೊಂಡು, "ನೋಡು, ನೀನವಳ ಅಂಗಶೋಧನೆ ಮಾಡುವಾಗ ಅವಳನ್ನು ಚಿವುರಿ ಕಚ್ಚಿ ಮಾಡಬೇಡ. ಆವಳ ಯಾವುದೇ ಅಂಗಕ್ಕೆ ಗಾಯವಾಗುವುದು ಇಷ್ಟವಲ್ಲ." ಎಂದ.

"ನಿಮ್ಮ ಆದೇಶವನ್ನು ಮರೆಯುವುದಿಲ್ಲ; ಇವಳನ್ನು ನನಗೊಪ್ಪಿಸಿರಿ." ಸಿಯಾರಾ ಹೇಳಿದಳು.

ಲುಯಿಗಿನಿಗೆ ತನ್ನನ್ನನುಸರಿಸುವಂತೆ ಸನ್ನೆಮಾಡಿ ಸಿಜಾರೆ ನಿಃಶಬ್ದ ವಾಗಿ ಕೋಣೆಯಿಂದ ಹೊರಟುಹೋದ. ಇಬ್ಬರೂ ಮತ್ತೊಂದು ಕೋಣೆಗೆ ಹೋದ ಬಳಿಕ ಸಿಜಾರೆ ಮೃದುಸ್ವರದಲ್ಲಿ ಅವನಿಗೆಂದ: "ಸಿಯಾರಾ ಚಮ ಮತ್ಕಾರ ಹುಡಿಗಿ. ಚತುರೆಯಿದ್ದ ಹಾಗೆ ಚಪಲೆಯೂ ಹೌದು. ಇಲಿನಳು ತನ್ನುಡಿಗೆಯಲ್ಲಿ ಏನಾದರೂ ಬಚ್ಚಿಟ್ಟುಕೊಂಡಿದ್ದರೆ ಸಿಯಾರಾ ಸಹಜ ವಾಗಿ ಬಯಲಿಗೆಳೆಯುವಳು. ಇವಳನ್ನು ವಂಚಿಸುವುದು ಆಕೆಗೆ ಅಶಕ್ಯವಾದ ಮಾತು."

"ಹಾಂ, ಸಿಯಾರಾ ಧೂರ್ತಳೇನೋ ಸರಿ. ಆದರೆ ವಿಪರೀತ ಉಲ ಕೋಚಿಯೆಂದು ನನ್ನ ಕಲ್ಪನೆ. ನೀವು ಅವಳಲ್ಲಿ ಬಹಳ ಹೆಚ್ಚಾಗಿ ವಿಶ್ವಾಸ ವಿಟ್ಟಿದ್ದೀರಿ. ಎಲ್ಲ ಮನೆಮಾತುಗಳನ್ನು ಅವಳಿಗೆ ಹೇಳಿಬಿಡುತ್ತೀರಿ; ಇದು ನನಗೆ ಸರಿ ಕಾಣುವುದಿಲ್ಲ. ಅವಳನ್ನು ಇಷ್ಟು ನಂಬುವುದು ನೆಟ್ಟಗಲ್ಲವೆಂದು ಖಂಡಿತ ಹೇಳಬಲ್ಲೆ ನಾನು. ನೀವೇನೇ ಎಂದುಕೊಳ್ಳಿರಿ—ನಾನಾಗಿದ್ದರೆ ಅವಳನ್ನು ಇಷ್ಟು ಮಟ್ಟಿಗೆ ನಂಬುತ್ತಿರಲಿಲ್ಲ."

"ಹೌದು, ಸಿಯಾರಾನನ್ನು ನಾನು ನಂಬುತ್ತೇನೆ, ಸ್ವಲ್ಪ ಹೆಚ್ಚಾ ಗಿಯೇ ನಂಬುತ್ತೇನೆ. ಅಕಾರಣವಾಗಿ ಇಷ್ಟು ನಂಬುತ್ತೇನೆಂದು ತಿಳಿಯಬೇಡ ಲುಯಿಗಿನಿ; ಅದಕ್ಕೆ ಯೋಗ್ಯ ಕಾರಣವಿದೆ. ನಿನಗೆ ಅವಳಲ್ಲಿ ವಿಶ್ವಾಸವಿಲ್ಲವೆಂದು

ತೋರುತ್ತವೆ. ಅವಿಶ್ವಾಸಪಡುವುದಕ್ಕೆ ಏನಾದರೂ ಕಾರಣವುಂಟೆ? ಅವಳ ಬಗ್ಗೆ ಸಂದೇಹವೇಕೆ?"

"ಈ ಸ್ತ್ರೀಜಾತಿಯಲ್ಲೇ ನನಗೆ ವಿಶ್ವಾಸವಿಲ್ಲ, ಅವರೆಷ್ಟೇ ಚತುರರಿರಲಿ, ಕಾರ್ಯದಕ್ಷರಿರಲಿ ಅವರಿಗೆ ಅವರ ಜತನ ಮಾಡಬಹುದು; ಆಮೋದ ಪ್ರಮೋದಗಳಲ್ಲಿ, ಸಾಂಸಾರಿಕ ವಿಷಯಗಳಲ್ಲಿ ಅವರು ಪುರುಷರ ಸಂಗಾತಿಯಾಗಲು ತಕ್ಕವರೇ; ಸುಖದುಃಖಗಳಲ್ಲಿ ಸಿರಿತನ ಬಡತನಗಳಲ್ಲಿ ಅವರನ್ನು ಪಾಲುಗಾರ್ತಿಯರನ್ನಾಗಿ ಮಾಡಿಕೊಳ್ಳಲು ನನಗೆ ಅಡ್ಡಿಯಿಲ್ಲ. ಆದರೆ ಅವರೆದುರು ಗುಪ್ತ ವಿಷಯಗಳನ್ನು ಪ್ರಕಟಗೊಳಿಸುವುದು ಸುರಕ್ಷಿತವಲ್ಲ. ಇದ್ದ, ನನ್ನ ಶೋಚನೀಯ ಅನುಭವದ ಫಲ. ನನಗಿನ್ನೂ ಎಳೆಹರಯವಿದ್ದಾಗ ಸಂಸಾರಜ್ಞಾನ ಮಾನವ ಚರಿತ್ರೆಯ ತಿಳಿವಳಿಕೆ ಇನ್ನೂ ಇಲ್ಲದಾಗ, ನಾನೊಮ್ಮೆ ಇಂಥ ದಡ್ಡತನದ ಕೆಲಸ ಮಾಡಿದ್ದೆ. ಅದರ ಫಲ ಏನಾಯಿತು? ನಾನು ಪೂರಾ ಮುಳುಗಿಯೇ ಹೋದವ, ಹೇಗೋ ನನ್ನ ಪ್ರಾಣರಕ್ಷಣೆಯಾಯಿತು. ಆಗಲೇ ನಾನು ದೃಢಸಂಕಲ್ಪ ಮಾಡಿದೆ–ಹೆಂಗಸರೆದುರಿಗೆ ಯಾವ ಗುಟ್ಟಿನ ಮಾತನ್ನೂ ಆಡಬಾರದು, ಎಂದೆಂದೂ ಆಡಬಾರದು."

"ಸ್ತ್ರೀಜಾತಿಯ ಬಗ್ಗೆ ನಿನಗೆ ಇಷ್ಟೊಂದು ಉಚ್ಚ ಭಾವನೆಯೆ?" ಎಂದು ಸಿಜಾರೆ ನಕ್ಕು ನುಡಿದ

"ಹಾಂ. ಒಬ್ಬರು ಯಾವುದನ್ನು ಮಾಡುವರೋ, ಮಾಡಬಲ್ಲರೋ ಅನ್ಯರು ಅದನ್ನು ಮಾಡುವುದಿಲ್ಲ; ಮಾಡಲಾರರು ಎಂಬ ಮಾತಿನಲ್ಲಿ ನನ್ನ ಭರವಸೆಯಿಲ್ಲ. ಸ್ವಾಭಾವಿಕವಾಗಿ, ತನ್ನ ನಾಲಿಗೆಯ ಚಾಪಲ್ಯವನ್ನು ಹಿಡಿತದಲ್ಲಿಟ್ಟುಕೊಳ್ಳುವುದು ಯಾವ ಹೆಂಗಸಿಗೂ ಅಸಾಧ್ಯ. ಆವಳು ಯಾವುದೊಂದು ಗುಪ್ತ ವಿಷಯವನ್ನು ಕೇಳಿದರೆ, ಅದನ್ನು ಪ್ರಕಟಗೊಳಿಸುವ ವರೆಗೂ ಲಗಾಮು ಹರಿದ ಕುದುರೆಯಂತೆ ತಿರುಗುತ್ತಲಿರುವರು, ಇಲ್ಲವೆ ಯಾವನೊಬ್ಬ ಪುರುಷನ ತಲೆಯಮೇಲೇರುವಳು. ನೀವವಳನ್ನು ದಂಡಿಸಲು ಪ್ರಯತ್ನಿಸಿದರೆ ನಿಮ್ಮನ್ನು ಬಿಟ್ಟು ದೂರಾಗುವಳು. ಹೆಂಗುಸರ ಗುಣ ನನಗೆ ತಿಳಿಯದೆ ಉಳಿದಿಲ್ಲ ಒಡೆಯರೆ! ತಲೆಗೆ ಬಡಿದು ಬುದ್ಧಿ ಬಂದಿವೆ. ಒಮ್ಮೆ ಅವರ ಬಲೆಯಲ್ಲಿ ಬಿದ್ದು ಸಾಕುಬೇಕಾಗಿದೆ. ನನಗೆ. ನನ್ನ ಮನದ ಮಾತು ಯಾವ ಹೆಂಗಸಿಗೂ ತಿಳಿಯದಿದ್ದುದರಿಂದಲೇ, ನಾನು ಸಿಕ್ಕುಬಿದ್ದಷ್ಟು ಸಲವೂ ಅವರ ಕಣ್ಣಿಗೆ

ದೊಳರಚಿ ಪಾರಾಗಿದ್ದೇನೆ.''

ಇನ್ನೂ ಏನೋ ಮಾತಾಡಲು ಲುಯಿಗಿನಿ ಹವಣಿಸಿದ. ಸಿಜಾರೆ ಸುಮ್ಮ ನಿರಲು ಸನ್ನೆಮಾಡಿ ಸರಕ್ಕನೆ ಕುರ್ಚಿಯಿಂದ ಎದ್ದುನಿಂತ. ಮುಖ ಮೇಲೆತ್ತಿ ಬಾಯಿ ತುಂಬಿದ ಹೊಗೆಯನ್ನು ಚೆಳಕಿಂಡಿಯ ಕಡೆ ಉಗುಳಿ ತಿರಸ್ಕಾರದಿಂದ ನುಡಿದ: "ಲುಯಿಗಿನಿ, ಹೆಂಗುಸರಂತೆ ಬರಿ ಮಾತು ನಿನ್ನದು! ಯಾವಾಗಲೂ ನಿನ್ನ ಬಾಯಿಂದ ಹುಸಿಗಾಳಿಯೆ;-ಆದರೆ ಸಿಯಾರಾ ಕೆಲಸ ಮಾಡುತ್ತಾಳೆ. ಬಹಳ ಮಾತನಾಡಿದರೂ ಕೂಡ ಅವಳು ಕೆಲಸದಲ್ಲಿ ತಾತ್ಸಾರ ಮಾಡುವು ದಿಲ್ಲ. ಹೆಂಗುಸಾದುದಕ್ಕಾಗಿಯೇ ತಿರಸ್ಕಾರಕ್ಕೆ ಅವಿಶ್ವಾಸಕ್ಕೆ ಪಾತ್ರಳೇ? ನೀನು ನಂಬಬಾರದವರನ್ನು ನಂಬಿ ಕೆಟ್ಟಿದ್ದರೆ ನಾನೂ ಮೋಸ ಹೋಗುವೆನೆ?"

ಸಿಜಾರೆ ಬಾಗಿಲು ತೆರೆದು ಎದುರಿನ ಕೋಣೆಯಲ್ಲಿ ಹೋದ. ಅಲ್ಲಿ ಸಿಯಾರಾ ನಿಂತುಕೊಂಡಿದ್ದಳು. "ಶೋಧನೆಯ ಫಲ ಏನಾಯಿತು? ಅದು ಸಿಕ್ಕಿತೆ?'' ಎಂದು ಅವಳನ್ನು ಕೇಳಿದ.

ಸಿಯಾರಾ ನಿರುತ್ಸಾಹದಿಂದ ಹೆಬ್ಬೆರಳಾಡಿಸುತ್ತ ಅಸ್ಪುಟವಾಗಿ ಉತ್ತರ ವಿತ್ತಳು: "ನಿಷ್ಫಲ."

"ನಿಷ್ಫಲ?''

"ಕುದುರೆಯ ತತ್ತಿಯ ಮಾತನ್ನು ಹೇಳುತ್ತಿದ್ದೇನೆ! ಅವಳ ಬಟ್ಟೆ ಬರೆ ಗಳಲ್ಲಿ ಏನೂ ಸಿಕ್ಕಲಿಲ್ಲ. ತಲೆಯ ಕೂದಲಿಂದ ಬೂಟಿನ ತಳದ ವರೆಗೂ ಹುಡುಕಿದೆ; ಅದು ಎಲ್ಲಿಯೂ ಇಲ್ಲ. ನುಂಗಿಲ್ಲವೆಂಬುದು ಮಾತ್ರ ಖಂಡಿತ; ಅಷ್ಟು ದೊಡ್ಡ ಬಿಲ್ಲೆಯನ್ನು ನುಂಗಿದ್ದರೆ ಗಂಟಲೊಳಕ್ಕೆ ಸಿಗುತ್ತಿತ್ತು; ಅಲ್ಲದೆ ಅದನ್ನು ನುಂಗುವುದರಿಂದ ಅವಳಿಗಾಗುವ ಲಾಭವೇನು?"

ಸಿಜಾರೆ ಸ್ವಲ್ಪ ಹೊತ್ತು ಸುಮ್ಮನಿದ್ದು ಮಾತನಾಡಿದ: "ಹಾಗಾದರೆ ಅವಳದನ್ನು ಆ ತುಬ್ಬುಗಾರನಿಗೆ-ಅವನನ್ನು ಏನಾದರೂ ಕೌಶಲ್ಯದಿಂದ ಇಲ್ಲಿಗೆ ಬರಮಾಡಿಕೊಂಡರೆ, ಅವನೊಂದು ಬಾರಿ ನನ್ನ ಕೈಗೆ ಸಿಕ್ಕರೆ! ಈ ಗುಪ್ತರಹಸ್ಯ ಅವನಿಗೆ ಗೊತ್ತಾಗಿದ್ದರೆ, ಅವನಿನ್ನೂ ಇದರಲ್ಲಿ ಹೆಚ್ಚು ಮುಂದುವರಿದಿಲ್ಲ, ಈಗಲೇ ಅವನನ್ನು ಹಿಡಿದು ಪುಡಿ ಮಾಡಲಿಕ್ಕೆ ಸಾಧ್ಯ ವಾದರೆ, ನಿಶ್ಚಿಂತೆಯಾಗುತ್ತಿತ್ತು. ಆದರೆ ಮನುಷ್ಯ ಭಯಂಕರ ಚತುರ, ಸಂಧಿಗ್ಧ ಮನಸಿನ ಅವನನಮ್ಮ ಸಹಜವಾಗಿ ಹಿಡಿಯುವ ಆಸೆಯಿದೆಯೆ?''

ಲುಯಿಗಿನಿ ಕೋಪದಿಂದ ಮಾತನಾಡಿದ: "ನೀವಂತೂ ಹೇಳಿದಿರಿ, ನಾನು ಬರೀ ಮಾತಿನ ಮಲ್ಲ, ಕೆಲಸ ಮಾಡುವವರು ಬೇರೆ. ನನಗಿಂತ ಹೆಂಗುಸರೇ ಮೇಲೆಂದು ಅನ್ನುತ್ತೀರಿ. ಅವಳೇನು ಮಾಡಬಲ್ಲಳು, ಏನು ಮಾಡಲಾರಳು ಎಂಬುದನ್ನು ನಾನರಿಯೆ. ಆದರೆ ಅವಳಿಂದಾಗದ್ದನ್ನು ನಾನು ಮಾಡಬಲ್ಲೆ."

"ಬರೀ ಬಡಾಯಿ ನಿನ್ನದು! ನಿನ್ನಿಂದೇನು ಸಾಧ್ಯ?" ಸಿಜಾರೆ ಕೇಳಿದ.

"ಆ ತುಬ್ಬುಗಾರ ಜ್ಲೇಕನನ್ನು ಈ ರಾತ್ರಿಯಲ್ಲಿಯೇ ಇಲ್ಲಿಗೆ ತರಬಲ್ಲೆ. ಆಮೇಲೆ, ನಮ್ಮ ಬಲೆಯಲ್ಲೊಮ್ಮೆ ಸಿಕ್ಕಮೇಲೆ–ಗೊತ್ತೇ ಇದೆ" ಎಂದು ಎದೆಯ ಮೇಲಿನ ಜೇಬಿನಲ್ಲಿದ್ದ ಪಿಸ್ತೂಲನ್ನು ಮೆಲ್ಲನೆ ತಟ್ಟಿ "ಬಲ್ಲಿರಷ್ಟೇ? ನನ್ನ ಈ ಅಸ್ತ್ರ ಶಬ್ದಮಾಡುವುದಿಲ್ಲ. ನಾಗರ ಹಾವಿನಂತೆ ಒಮ್ಮೆ ಬುಸ್ಸೆಂದು ಜೀವ ತಕ್ಕೊಳ್ಳುತ್ತದೆ. ಪಿಸ್ತೂಲು ಹಾರಿದ್ದು ಹೊರಗೆ ಯಾರಿಗೂ ತಿಳಿಯುವುದಿಲ್ಲ." ಎಂದ.

ಅವನ ಮಾತನ್ನು ಕೇಳಿ ವಿಚಾರ ಮಾಡುತ್ತ, ಗಲ್ಲದ ಮೇಲೆ ಕೈಯಾಡಿಸುತ್ತ, "ಹಾಂ, ಅವನನ್ನು ಏನಾದರೊಂದು ಚಾತುರಿಯಿಂದ ಇಲ್ಲಿಗೆ ಬರುವಂತೆ ಮಾಡಿದರೆ ನಿಜವಾಗಿ ಅದೊಂದು ಉತ್ತಮ ಕಾರ್ಯವಾದಂತೆ. ಆದರೆ ಸತ್ಯವಾಗಿಯೂ ಸಾಧ್ಯವೇ ಇದು? ಅಥವಾ ಬರಿ ಒಣ ಮಾತೊ? ವಂಚನೆಯೊ? ಎಂದು ಕೇಳಿದ.

"ವಂಚನೆಯಿಂದ ನನಗಾಗುವ ಲಾಭವೇನು? ಸುಳ್ಳು ಮಾತಿನಿಂದ ನಿಮ್ಮನ್ನು ಎಷ್ಟು ಸಮಯ ವಂಚಿಸಬಹುದು?"

"ನೀನು ಬಲ್ಲೆ–ಇದು ಸಹಜವಲ್ಲ, ಕಾಲಸರ್ಪನೊಡನೆ ಆಟ! ಯಾವಾಗಲೂ ಸತರ್ಕನಾಗಿರುವ ಆ ಧೂರ್ತ ತುಬ್ಬುಗಾರನನ್ನು ಯಾವ ಕೌಶಲ್ಯದಿಂದ ಇಲ್ಲಿಗೆ ತರುವೆ?"

"ಮೊದಲು ಮಾತು ಬೇಡ, ಕೆಲಸ ಮೊದಲು. ಅದನ್ನೀಗ ಕೇಳಬೇಡಿ." ಎಂದ ಲುಯಿಗಿನಿ.

ಸಿಜಾರೆ ಮತ್ತೆ ಒತ್ತಾಯಪಡಿಸಲಿಲ್ಲ. "ಒಳ್ಳೇದು, ಹಾಗೇ ಆಗಲಿ. ಆದರೆ ಅವನನ್ನು ಹಿಡಿಯಲಿಕ್ಕೆ ಹೋಗಿ ಅವನ ಬಲೆಯಲ್ಲಿಯೇ ಬೀಳಬೇಡ. ಅವನು ಅಷ್ಟು ಸಹಜ ಮನುಷ್ಯನಲ್ಲ, ಗೊತ್ತಿದೆಯಷ್ಟೆ? ಅಷ್ಟರೊಳಗೆ ಈಕೆಗೆ ಬುದ್ಧಿಗಲಿಸಲಾಗುತ್ತದೇನೋ ನೋಡುತ್ತೇನೆ. ಇವಳನ್ನು ಹಾದಿಗೆ ತಂದು

ಬಾಯಿ ತೆರೆಸುವುದು ಅಷ್ಟೇನೂ ಕಠಿನವಾಗಲಿಕ್ಕಿಲ್ಲ.” ಎಂದು ನುಡಿದ.

ಲುಯಿಗಿನಿ ಇಲಿನಳನ್ನು ಆಪಾದಮಸ್ತಕವಾಗಿ ಮತ್ತೊಮ್ಮೆ ತೀಕ್ಷ್ಣ ದೃಷ್ಟಿಯಿಂದ ನೋಡಿ ಕೋಣೆಯಿಂದ ಹೊರಬಿದ್ದ.

☼ ☼ ☼ ☼ ☼

ಈ ಸಮಯದಲ್ಲಿಯೇ ಪ್ರಾಚೀನ ಬಲೋನ ನಗರದಲ್ಲಿ ನಿರ್ಜನ ಉದ್ಯಾನದ ಹತ್ತಿರ ಗಸ್ತಿ ತಿರುಗುತ್ತಿದ್ದ ಇಬ್ಬರು ಪೋಲಿಸರಿಗೆ ಒಂದು ಹೆಣ ಸಿಕ್ಕಿತು. ಅದನ್ನು ಪರಿಶೋಧಿಸಲಾಗಿ ಹೆಸರು ಸ್ಕಾರ್ಲೇಟಿ ಎಂದು ಗೊತ್ತಾಯಿತು. ಅವನಲ್ಲಿದ್ದ ಪಾಸಪೋರ್ಟಿನ ತಾರೀಖಿನಿಂದ ಅವನು ಅಂದೇ ಲಂಡನಿನಿಂದ ಹೊರಟು ಬಲೋನಿಗೆ ಬಂದಿದ್ದನೆಂದು ತಿಳಿಯಿತು. ಅರ್ಥಾತ್ ಬಂದ ಸ್ವಲ್ಪ ಸಮಯದಲ್ಲಿ ಅವನನ್ನು ಯಾರೋ ಗುಂಡಿಕ್ಕಿ ಕೊಂದಿರಬೇಕೆಂದು ಎನಿಸಿತು. ಅವನ ಜೇಬಿನಲ್ಲಿದ್ದ ವಿಪುಲವಾದ ಧನವನ್ನು ಅಪಹರಿಸಲಿಲ್ಲ. ಹೀಗಾಗಿ ಅವನನ್ನು ಯಾರು ಕೊಂದರು, ಕೊಲೆಯ ಉದ್ದೇಶವೇನು ಎಂಬುದು ತಿಳಿಯದೆ ಹೋಯಿತು. ಆದರೆ ಸ್ಕಾರ್ಲೇಟಿಯನ್ನು ಲುಯಿಗಿನಿ ಕೊಂದು, ಆ ಸಮಾಚಾರವನ್ನು ತನ್ನ ಒಡೆಯನಿಗೆ ಹೇಳಿದ್ದನ್ನು ಓದುಗರು ಕೇಳಿದ್ದೀರಿ.

೫

ಬ್ಲೇಕರು ಮರಿಸನ ಅಂಗಡಿಯೊಳಗೆ ಪುನಃ ಪ್ರವೇಶಿಸಿ ಶ್ರಾಂತಭಾವದಿಂದ ಕುಳಿತು ಅವನಿಗೆಂದರು: “ಇಂದು ನೀನು ನನ್ನ ಆಶ್ರಯದಲ್ಲಿ ರಾತ್ರಿಯನ್ನು ಕಳೆದರೆ, ಉಳಿದಷ್ಟು ರಾತ್ರಿಯನ್ನು ನಿರ್ವಿಘ್ನವಾಗಿ ಕಳೆಯುವೆ ಮರಿಸ್. ನನ್ನ ಆಶ್ರಯದಲ್ಲಿ ವಿಪತ್ತಿನ ಭಯವಿಲ್ಲ ನಿನಗೆ. ನೀನಿಲ್ಲಿಯೇ ಇನ್ನು ಸ್ವಲ್ಪ ಸಮಯವಿದ್ದರೆ, ಯಾವ ಹೊತ್ತಿಗೆ ಯಾವ ಅದೃಶ್ಯ ಹಸ್ತದಿಂದ ಹಾರಿದ ಪಿಸ್ತೂಲಿನಿಂದ ನಿನ್ನ ತಲೆ ಚೂರಾದೀತೋ ಅಥವಾ ಎದೆ ಒಡೆದೀತೋ ಯಾರು ಬಲ್ಲರು? ಅಂಗಡಿ ಬಿಟ್ಟು ಮನೆಗೆ ಹೋದರೂ ನೀನು ಉಳಿದುಕೊಂಡೀ ಎಂದು ನನಗೆನಿಸುವುದಿಲ್ಲ; ಶತ್ರುಗಳಿಗೆ ನಿನ್ನ ಮನೆ ಗೊತ್ತಿಲ್ಲವೆಂದು ತಿಳಿದುಕೊಳ್ಳಲಾಗದು. ಒಂದು ವೇಳೆ ನಿನ್ನ ಮನೆ ಅವನಿಗೆ ಗೊತ್ತಿಲ್ಲ

ದಿದ್ದರೂ ನಿನ್ನ ಚಲನವಲನದ ಮೇಲೆ ಕಣ್ಣಿಟ್ಟಿರುವುದು ನಿಃಸಂದೇಹ."

ಬ್ಲೇಕರ ಮಾತನ್ನು ಕೇಳಿ ಮರಿಸನ ಮುಖವು ಭಯದಿಂದ ಮ್ಲಾನವಾಯಿತು. ಪ್ರತ್ಯಕ್ಷ ಪ್ರಮಾಣವನ್ನು ಕಂಡ ಬಳಿಕ ಅವರೊಡನೆ ವಾದಿಸುವ ಪ್ರವೃತ್ತಿ ಅವನಿಗುಂಟಾಗಲಿಲ್ಲ. "ನೀವು ಹೇಳುವುದು ಸರಿ, ಮಿ. ಬ್ಲೇಕ್," ಅವನು ವಿಹ್ವಲ ಸ್ವರದಿಂದ ಮಾತನಾಡಿದ: "ನೀವಿಂದಿನ ರಾತ್ರಿ ಈ ವಿಪನ್ನ ಹತಭಾಗ್ಯನಿಗೆ ಆಶ್ರಯ ಕೊಡಲು ಅಪೇಕ್ಷಿಸುತ್ತಿದ್ದೀರಿ; ನಿಮ್ಮೀ ಅನುಗ್ರಹಕ್ಕಾಗಿ ಧನ್ಯವಾದ. ನಾನೀಗಲೇ ಅಂಗಡಿ ಮುಚ್ಚಿಕೊಂಡು ನಿಮ್ಮ ಹಿಂದೆ ಬರುವೆನು. ನನ್ನ ಜೀವನ ಇಲ್ಲಿ ಇನ್ನೊಂದು ಕ್ಷಣವೂ ಸುರಕ್ಷಿತವಿಲ್ಲ ಎಂದು ನನ್ನ ಮನವರಿಕೆಯಾಗಿದೆ."

ಅಂಗಡಿ ಮುಚ್ಚಿಕೊಂಡು ಇಬ್ಬರೂ ಹೊರಟರು. ಹೋಗು ಹೋಗುತ್ತ; ಮರಿಸ್ ಬ್ಲೇಕರಿಗೆ,

"ಈ ನಿರ್ಜನವಾದ ದಾರಿಯಲ್ಲಿ ಇಬ್ಬರೇ ಹೊರಟಿದ್ದೇವೆ ಹಠಾತ್ತಾಗಿ ಯಾವ ಕಡೆಯಿಂದಲಾದರೂ ಪಿಸ್ತೂಲಿನ ಗುಂಡು—"

"ಹಾಂ, ಆ ಭಯ ಇದೆ. ಶೀಘ್ರವೇ ಒಂದು ಟ್ಯಾಕ್ಸಿ ಸಿಕ್ಕರೆ ಅನುಕೂಲ" ಬ್ಲೇಕ್ ಮರಿಸನ ಮಾತನ್ನು ಅರ್ಧಕ್ಕೇ ತಡೆದು ಬ್ಲೇಕ್ ಉತ್ತರವಿತ್ತರು.

ಕೊಂಚ ದೂರ ಮುಂದುವರಿದ ಬಳಿಕ ಒಂದು ಟ್ಯಾಕ್ಸಿ ಕಂಡಿತು. ಅದು ಬರಿದಾಗಿತ್ತು. ಅದರ ಚಾಲಕನು ಬಾಡಿಗೆ ಮುಗಿಸಿಕೊಂಡು ತನ್ನ ಸ್ಥಳಕ್ಕೆ ತಿರುಗಿ ಹೊರಟಿದ್ದನು. ಬ್ಲೇಕ್ ಕೈಮಾಡಿ ಟ್ಯಾಕ್ಸಿಯನ್ನು ನಿಲ್ಲಿಸಿ ಚಾಲಕನ ಮುಖವನ್ನು ದಿಟ್ಟಿಸಿ ನೋಡಿದ. ಅವನು ಅವರ ಪರಿಚಿತ. ಅವರ ಓಣಿಯಲ್ಲಿ ಆಗಾಗ ಅವನ ಟ್ಯಾಕ್ಸಿಯ ಸಂಚಾರವಿರುತ್ತಿತ್ತು. ಅವನ ಟ್ಯಾಕ್ಸಿಯಲ್ಲಿ ಬ್ಲೇಕ್ ಈ ಮೊದಲು ಎಷ್ಟೋ ಸಲ ಅಡ್ಡಾಡಿದ್ದರು. ಅವರು ನಿಶ್ಚಿಂತ ಚಿತ್ತದಿಂದ ಮರಿಸನೊಡನೆ ಅದನ್ನೇರಿ, ಬೇಕರ್ ಸ್ಟ್ರೀಟಿಗೆ ತಮ್ಮ ಮನೆಗೆ ಹೋಗಬೇಕೆಂದು ಚಾಲಕನಿಗೆ ಹೇಳಿದರು.

"ನಿನ್ನ ಮದುವೆ ಗೊತ್ತಾಗಿದ್ದ ಯುವತಿ ತೆಳ್ಳನೆಯ ಗಿಡ್ಡ ಆಳೆ?" ಟ್ಯಾಕ್ಸಿ ಓಡುತ್ತಿದ್ದಾಗ ಬ್ಲೇಕ್ ಮರಿಸನನ್ನು ಪಕ್ಕನೆ ಕೇಳಿದರು.

ಈ ಆಕಸ್ಮಿಕ ಪ್ರಶ್ನೆಯಿಂದ ಮರಿಸ್ ಕುಂಠಿತನಾಗಿ ಉತ್ತರವಿತ್ತ:

“ಅವಳ ಬಗ್ಗೆ ನಿಮಗೇನು ಹೇಳಿದ್ದೇನೋ ನೆನಪಿಲ್ಲ. ಅವಳು ಗಿಡ್ಡ ಅಥವಾ ತೆಳ್ಳನೆಯ ಆಳಲ್ಲ. ಆವಳು ದೀರ್ಘಾಂಗಿ; ದೇಹ ಪರಿಪುಷ್ಟ; ನನ್ನ ದೃಷ್ಟಿಯಲ್ಲಿ ರೂಪವತಿ ಎಂದು ಹೇಳುವುದು ಅತಿಯಾದೀತು.”

ಬ್ಲೇಕ್ ಸಂದೇಹಪಟ್ಟಿದ್ದರು: ಇಲಿನಳೇ ಏನೋ ಒಂದು ಗುಪ್ತ ಕಾರಣಕ್ಕಾಗಿ ಸ್ಕಾರ್ಲೆಟಿಯ ಅಂಗಡಿಯಲ್ಲಿ ಹೆಸರು ಬದಲಿಸಿಕೊಂಡು ಇದ್ದಿರ ಬಹುದು, ಕುಮಾರಿಯೆಂದು ಹೇಳಿಕೊಂಡು ರೂಪಮುಗ್ಧನಾದ ಮರಿಸನನ್ನು ಪ್ರೇಮಾಭಿನಯದಿಂದ ವಶಪಡಿಸಿಕೊಂಡಿರಬಹುದು ಎಂದು ಏಕೆಂದರೆ ಅವಳು ಯಾವ ಉದ್ದೇಶಕ್ಕಾಗಿ ಯಾವಾಗ ಎಂತಹ ಆಟ ಆಡುವಳೆಂಬುದು ಅವರಿಗೆ ತರ್ಕಾತೀತವಾಗಿತ್ತು. ತಮ್ಮ ಸಂದೇಹ ಅನುಕೂಲಕರವೆಂದು ಅವರಿಗೆನಿಸಿತು.

ಇಲಿನಳ ಬಗ್ಗೆ ಅವರು ವಿಚಾರಮಾಡತೊಡಗಿದರು. ಆ ರಾತ್ರಿ ಎಲ್ಲಿಯೋ ಒಂದು ಕಡೆ ಅವಳು ಹೋಗಬೇಕಾಗಿತ್ತೆಂಬುದು ಮಾತ್ರ ಅವಳ ಮಾತಿನಿಂದ ತಿಳಿದಿತ್ತು. ಅದರ ಉದ್ದೇಶವೇನೆಂಬುದು ಗೊತ್ತಾಗಿರಲಿಲ್ಲ. ಮರುದಿನ ಸಕಾಲಕ್ಕೆ ಕೋರ್ಟಿನಲ್ಲಿ ಉಪಸ್ಥಿತಳಾಗುವಳೋ ಇಲ್ಲವೋ ಎಂಬುದೂ ಅವರಿಗೆ ತಿಳಿಯದಾಯಿತು. ನಾನಾ ಚಿಂತೆಗಳಿಂದ ಅವರ ಹೃದಯ ಹೊಯ್ದಾಡುತ್ತಿತ್ತು.

ಕೆಲ ನಿಮಿಷಗಳಲ್ಲಿಯೇ ಟ್ಯಾಕ್ಸಿ ಅವರ ಮನೆಯ ಮುಂದೆ ಹೋಗಿ ನಿಂತಿತು. ಬ್ಲೇಕರು ಮರಿಸನೊಂದಿಗೆ ತಮ್ಮ ಕುಳ್ಳಿರುವ ಕೋಣೆಯನ್ನು ಪ್ರವೇಶಿಸಿದಾಗ ಅಲ್ಲಿಯ ಗಡಿಯಾಳ ಎರಡು ಗಂಟೆ ಬಾರಿಸಿತು. ಬ್ಲೇಕ್ ಅತಿಥಿ ಸತ್ಕಾರಕ್ಕಾಗಿ ವಿಸ್ಕಿ, ಸೋಡಾ, ಗ್ಲಾಸುಗಳ ಯೋಜನೆ ಮಾಡುತ್ತಿದ್ದಾಗ ಟೇಲಿಫೋನು ಟ್ರಿಂಗ್‌ಟ್ರಿಂಗ್ ಎಂದಿತು.

“ಮತ್ತೇನಪ್ಪ ಇದು! ರಾತ್ರಿ ಎರಡಾಗಿದ್ದರೂ ನನ್ನೊಡನೆ ಫೋನಿನಲ್ಲಿ ಮಾತನಾಡಲು ಯಾರಿಗೆ ಚಪಲವುಂಟಾಗಿದ್ದೀತು? ಎಲ್ಲಿಯಾದರೂ ಕೊಲೆ ದರೋಡೆ ಆಗಿರಲಿಕ್ಕಿಲ್ಲವಷ್ಟೆ?” ಬ್ಲೇಕ್ ಬೇಸರದಿಂದ ಅಸ್ಪಷ್ಟವಾಗಿ ನುಡಿದು, ರಿಸೀವರನ್ನು ಕಿವಿಗೆತ್ತಿ ಹಿಡಿದರು.

“ಹಲ್ಲೋ!” ಉಚ್ಚಧ್ವನಿ ಬಂದಿತು.

“ಯಾರು ನೀವು? ರಾತ್ರಿ ಎರಡೂವರೆ ಆಗುತ್ತ ಬಂತು—ಏನು ಕೆಲಸ ಈಗ?”

"ನಿಮ್ಮದೊಂದು ಜಾಕೀಟು ಹೋಗಿದೆಯಲ್ಲವೆ? ಅದನ್ನೇ ತಿಳಿದು ಕೊಳ್ಳಬೇಕಾಗಿತ್ತು. ಈ ಅಸಮಯದಲ್ಲಿ ನಿಮಗೆ ತೊಂದರೆ ಕೊಡುತ್ತಿರುವುದು ಯಾವ ಸ್ವಾರ್ಥಕ್ಕಾಗಿಯೂ ಅಲ್ಲ."

"ಈ ಸಮಾಚಾರ ತಿಳಿಯಬೇಕೆಂಬ ನಿಮ್ಮ ಸ್ವಾರ್ಥರಹಿತ ಕುತೂಹಲಕ್ಕೆ ಕಾರಣವೇನು?" ಕಿಂಚಿತ್ ಸಮಯ ಸುಮ್ಮನಿದ್ದು ಬ್ಲೇಕ್ ಪ್ರಶ್ನಿಸಿದರು.

"ಅದನ್ನು ಮರಳಿ ಪಡೆಯುವುದಕ್ಕೆ ನೀವು ಆತುರರಾಗಿರಬಹುದೆಂದು ನನಗೆನಿಸಿತು. ಅದು ಬೇಕಾಗಿದ್ದರೆ ಇದೇ ಒಳ್ಳೆಯ ಸುಯೋಗ."

"ಎಂದರೆ ಜಾಕೀಟು ನಿಮ್ಮ ಹತ್ತಿರವೇ ಇದೆಯೋ?"

"ನಿಮ್ಮ ಜಾಕೀಟನ್ನು ನಾನು ಕದ್ದಿದ್ದರೆ ಅದನ್ನು ತಿರುಗಿ ಕೊಡುವುದಕ್ಕಾಗಿ ನಿಮ್ಮನ್ನು ಕರೆಯುತ್ತಿದ್ದೆನೆಂದು ತಿಳಿದಿರೇನು? ನನ್ನ ತಲೆ ಕೆಟ್ಟಿದೆಯೆಂದು ಭಾವಿಸಿದ್ದೀರೋ?"

"ನಿಮ್ಮ ತಲೆ ಸಮ ಇದ್ದರೆ, ಈ ಅಪರಾತ್ರಿಯಲ್ಲಿ ನನ್ನನ್ನು ಕೂಗದೆ, ಜಾಕೀಟನ್ನು ಪೋಲಿಸ್ ಕಚೇರಿಗೆ ಕಳಿಸುತ್ತಿದ್ದಿರಿ, ಅಥವಾ ಗಸ್ತಿಯವನ ಕಡೆಗೆ ಕೊಡುತ್ತಿದ್ದಿರಿ ಏನೇ ಇರಲಿ, ನಿಮ್ಮ ಉದ್ದೇಶವೇನು ಹೇಳಿರಿ."

"ಜಾಕೀಟನ್ನು ತಿರುಗಿ ಪಡೆಯುವ ಇಚ್ಛೆ ನಿಮಗಿದ್ದರೆ ನನ್ನನ್ನು ಕಾಣಿರಿ. ಸೇಂಟ್ ಜಾಯಿಲ್ಸ್ ಸರ್ಕಸಿನ ಮೂಲೆಯಲ್ಲಿರುವ ಮನೆಯ ಹತ್ತಿರವೇ ನಾನು ನಿಮಗೆ ಕಾಣುವೆ. ನಾನು ಅಲ್ಲಿಯೇ ಅಡ್ಡಾಡುತ್ತಿರುವೆ."

"ಆದರೆ ನೀವು ಯಾರೋ ಇನ್ನೂ ಗೊತ್ತಾಗಲಿಲ್ಲ. ನಿಮ್ಮ ಪರಿಚಯ ಹೇಳದೆ, ನನ್ನೊಡನೆ ಮಾತಾಡುತ್ತಿರುವಿರಿ, ನನ್ನನ್ನು ನಿಮ್ಮ ದರ್ಶನಕ್ಕೆ ಕರೆಯುತ್ತಿರುವಿರಿ, ನಿಮ್ಮ ಉದ್ದೇಶವಾದರೂ ಏನು? ನಿಮ್ಮ ಯಾವ ದುರುದ್ದೇಶವೂ ಇಲ್ಲವೆಂದು ಹೇಗೆ ತಿಳಿದುಕೊಳ್ಳಬೇಕು? ನಿಃಸ್ವಾರ್ಥ ಪರೋಪಕಾರವೇ ನಿಮ್ಮ ಉದ್ದೇಶವೋ? ಮೊದಲು ನಿಮ್ಮ ಹೆಸರನ್ನು ಹೇಳಿರಿ."

"ಇಲ್ಲಿ ನೋಡಿ ಮಿಸ್ಟರ್, ಒಂದು ವಿಶೇಷ ಕಾರಣಕ್ಕಾಗಿ, ಟೆಲಿಫೋನಿನಲ್ಲಿ ಹೆಸರು ಹೇಳುವುದು ನನಗೆ ಉಚಿತವೆಂದಿನಿಸುವುದಿಲ್ಲ. ಆದರೆ ನನ್ನನ್ನು ಭೆಟ್ಟಿಯಾದಾಗ ನಾನು ಸುಳ್ಳಾಡಿಲ್ಲವೆಂಬುದು ನಿಮಗೇ ಗೊತ್ತಾಗುತ್ತದೆ."

"ನನ್ನೆದುರು ತಮ್ಮ ಹೆಸರನ್ನು ಹೇಳಲು ಅಂಜುವವರನ್ನು ಕಾಣಲು

ನನಗಿಷ್ಟವಿಲ್ಲ. ಹೆಸರು ಬಚ್ಚಿಟ್ಟುಕೊಂಡು ಬರೆಯಲಾದ ವಿನಾಮಪತ್ರಗಳಿಗೆ ನಾನು ಉತ್ತರವನ್ನೇ ಕೊಡುವುದಿಲ್ಲ; ಅವು ಕಸದ ಬುಟ್ಟಿಯನ್ನೇ ಕಾಣು ವುವು. ಹೆಸರು ಬಚ್ಚಿಟ್ಟುಕೊಂಡು ನನ್ನೊಡನೆ ಫೋನಿನಲ್ಲಿ ಮಾತಾಡುವವರ ಮಾತಿಗೂ ಅಷ್ಟೇ ಬೆಲೆ–ತಿಳಿಯಿತೆ?"

ಇಷ್ಟಾದರೂ ಆ ಮನುಷ್ಯ ಬಿಟ್ಟಪ್ಪನಲ್ಲ. "ಆದರೆ ಫೋನಿನಲ್ಲಿ ಯಾರಿಗೂ ಹೆಸರು ಹೇಳುವ ಅಭ್ಯಾಸ ನನಗಿಲ್ಲ. ಅದು ಹೋಗಲಿ, ಇಂದು ರಾತ್ರಿ ನಿಮ್ಮೊಬ್ಬ ಮಹಿಳಾ ಸ್ನೇಹಿತೆ ನಿಮ್ಮೊಡನೆ ಅಡ್ಡಾಡುತ್ತಿದ್ದಳಲ್ಲವೆ?" ಎಂದು ಕೇಳಿದ.

ಬ್ಲೇಕ್ ಇಲಿನಳ ವಿಷಯವನ್ನು ನೆನೆದು ಕೋಪದಿಂದ, "ಅವರಲ್ಲಿ ಏನಾದರೂ ತಪ್ಪಿದೆಯೇನು?" ಎಂದು ಕೇಳಿದರು.

"ತಪ್ಪುಗಿಪ್ಪು ನಾನರಿಯೆ. ನನಗಿಷ್ಟೇ ಗೊತ್ತು–ಅವಳಿಗೆ ವಿಪತ್ತೊದ ಗಿದೆ. ಈ ಸಮಾಚಾರವನ್ನು ನಿಮಗೆ ತಿಳಿಸಿದ್ದೇನೆ. ಇದಕ್ಕೂ ಹೆಚ್ಚಿಗೆ ಅರಿತು ಕೊಳ್ಳುವ ಅಪೇಕ್ಷೆಯಿದ್ದರೆ ಕೂಡಲೆ ಇಲ್ಲಿಗೆ ಬನ್ನಿ."

"ಒಳ್ಳೇದು."

ರಿಸೀವರನ್ನು ಕೆಳಗಿರಿಸಿ ಬ್ಲೇಕ್ ಡೆಸ್ಕಿನ ಡ್ರಾಅರಿನ ಬಳಿ ಬಂದರು. ಅವರು ವ್ಯಗ್ರಭಾವದಿಂದ ಡ್ರಾಅರ್ ತೆರೆಯುವುದನ್ನು ಕಂಡು ಮರಿಸ್ "ಏನು ವರ್ತಮಾನ ಮಿ. ಬ್ಲೇಕ್?" ಎಂದು ಕೇಳಿದ.

ಒಂದು ಆಟೊಮೆಟಿಕ್ಕನ್ನು ಹೊರದೆಗೆದು ಜೇಬಿನಲ್ಲಿಟ್ಟುಕೊಳ್ಳುತ್ತ ಬ್ಲೇಕ್ ಉತ್ತರವಿತ್ತರು: "ಯಾರೋ ಒಬ್ಬರು ನನ್ನ ಜಾಕೀಟಿನ ಸುದ್ದಿ ಹೇಳಿ, ಅದನ್ನು ತಮ್ಮ ಹತ್ತಿರ ಬಂದು ಒಯ್ಯಬೇಕೆಂದು ಕರೆಯುತ್ತಿದ್ದಾರೆ. ಬಹುಶಃ ಯಾರೋ ಮಿತ್ರರು ರಾತ್ರಿಯ ಈ ಕೊನೆಯ ಯಾಮದಲ್ಲಿ ನನ್ನನ್ನು ಹಿಡಿಯುವುದಕ್ಕಾಗಿ ಬಲೆ ಹಾಕಿ ಕೂತಹಾಗಿದೆ. ಜಾಕೀಟು ನೆವ ಅಷ್ಟೆ."

"ನೀವು ತಿಳಿದೂ ತಿಳಿದೂ ಆ ಬಲೆಯಲ್ಲಿ ಬೀಳಲು ಹೊರಟಿರುವಿ ರೇನು?" ವಿಸ್ಮಯದಿಂದ ಕೇಳಿದ ಮರಿಸ್.

"ನನ್ನನ್ನು ಬಲೆಯಲ್ಲಿ ಹಿಡಿಯುವುದು ಇಷ್ಟು ಸಹಜವೆ? ಆತ್ಮರಕ್ಷ ಣೆಯ ಕೌಶಲ ನನಗೆ ಗೊತ್ತಿದೆ." ಟೊಪ್ಪಿಗೆಯನ್ನು ತಲೆಗಿಟ್ಟುಕೊಳ್ಳುತ್ತ ಎಂದರು ಬ್ಲೇಕ್.

"ನಿಮ್ಮ ಒಪ್ಪಿಗೆಯಿದ್ದರೆ ನಾನೂ ಬರುತ್ತೇನೆ ಸಂಗಡ. ಏಕೆಂದರೆ–"

"ಬೇಡ ನನ್ನೊಂದಿಗೆ ನೀನು ಬರುವ ಅಗತ್ಯವಿಲ್ಲ. ನೀನು ಕೇಶಕರ್ತನ ಚತುರನಿರಬಹುದು; ಆದರೆ ಇಂಥಹ ಕಾರ್ಯಗಳಲ್ಲಿ ನಿಮ್ಮ ಬುದ್ಧಿ–ಕೈ ನಡೆ ಯದು. ನೀನು ಬರುವುದರಿಂದ ನನಗೆ ಸಹಾಯವಾಗುವ ಬದಲು ನಿನಗಾಗಿ ಹೆಚ್ಚು ತೊಂದರೆ ಪಡಬೇಕಾದೀತು. ಬೇಡವೆಂದುದಕ್ಕೆ ದುಃಖಪಡಬೇಡ, ಮರಿಸ್. ನಾನು ಒಬ್ಬನೇ ಇದ್ದರೂ ಈ ಕಾರ್ಯದಲ್ಲಿ ನಾನು ತೋರಿಸುವ ಶಕ್ತಿ–ಕೌಶಲಗಳು ಎಂದೂ ಹೋಗವು."

ಬ್ಲೇಕ್ ಹೊರಗೆ ಬಂದು ಒಂದು ಬಾಡಿಗೆಯ ಟ್ಯಾಕ್ಸಿಯನ್ನು ಹಿಡಿದು, ಸೇಂಟ್ ಜಾಯಿಲ್ಸ್ ಸರ್ಕಸಿನ ಬಳಿ ಹೋದರು. ಟಟನ್‌ಹಾಮ್ ಕೋರ್ಟ್ ರೋಡು–ಆಕ್ಸ್‌ಫರ್ಡ್ ಸ್ಟ್ರೀಟುಗಳ ಸಂಯೋಗಸ್ಥಳದಲ್ಲಿ ಟ್ಯಾಕ್ಸಿಯಿಂದಿಳಿದು, ಸೂಕ್ಷ್ಮದೃಷ್ಟಿಯಿಂದ ನಾಲ್ಕು ಕಡೆ ನೋಡಿದರು ಒಂದು ದೀಪದ ಕಂಬದ ಹತ್ತಿರ ಮನುಷ್ಯಮೂರ್ತಿಯೊಂದು ಕಂಡಿತು. "ಏನಪ್ಪ, ನನ್ನ ಜಾಕೀಟಿನ ಸಮಾಚಾರವೇನು" ಆ ಮನುಷ್ಯನ ಹತ್ತಿರ ಹೋಗಿ ಬ್ಲೇಕ್ ಕೇಳಿದರು.

"ಓ, ರಾಯರು ಬಂದುಬಿಟ್ಟರು." ಎಂದು ಆ ಮನುಷ್ಯ ಅವರಿಗೆ ನಮಸ್ಕರಿಸಿ ವಿಸ್ಮಯಸೂಚಕವಾಗಿ "ಬರಲಿಕ್ಕಿಲ್ಲವೋ ಏನೋ ಎಂದು ತಿಳಿ ದಿದ್ದೆ ನಾನು" ಎಂದನು.

"ಓಹೋ, ನೀನೇ! ಬಿಲ್ ಮಿಲರ್, ಬುಲ್‌ಡಾಗ್ ಚೋರದಲದ ನಾಯಕ!" ಅವನನ್ನು ದಿಟ್ಟಿಸಿ ನೋಡಿ ಬ್ಲೇಕ್ ಉದ್ಗರಿಸಿದರು.

"ಬುಲ್‌ಡಾಗ್ ದಲದ ಬಗ್ಗೆ ನಿಮಗೆ ನಾನೇನೂ ಹೇಳಬೇಕಾಗಿಲ್ಲ ಸ್ವಾಮಿ! ನನ್ನ ವೈಯಕ್ತಿಕ ವಿಷಯವಾಗಿ ಒಂದೆರಡು ಮಾತು ಹೇಳುವು ದಕ್ಕಾಗಿ ನಿಮ್ಮ ಭೆಟ್ಟಿ ಬೇಕಾಗಿತ್ತು; ನನ್ನದೊಂದು ದೂರಿದೆ." ಬಿಲ್ ಮಿಲರ್ ಹೇಳಿದ.

"ದೂರೆ?" ವಿಸ್ಮಯದಿಂದ ಕೇಳಿದರು ಬ್ಲೇಕ್.

"ನೋಡಿ ಒಡೆಯರೆ, ಯಾರಾದರೂ ನನ್ನ ಅಪಮಾನ ಮಾಡಿದರೆ ನನಗೆ ಸಹಿಸುವುದಿಲ್ಲ; ವಿಶೇಷವಾಗಿ, ಯಾವನೊಬ್ಬ ವಿದೇಶೀಯನು ತನ್ನ ಸಾಮರ್ಥ್ಯದಿಂದ ಮನಬಂದಂತೆ ವರ್ತಿಸಿದರೆ ಆ ಧೃಷ್ಟತೆ ಅತ್ಯಂತ ಅಸಹ್ಯ; ಅವನನ್ನು ದಂಡಿಸುವ ಪ್ರವೃತ್ತಿಯುಂಟಾಗುವುದು ಸ್ವಾಭಾವಿಕ. ಅವನು

ನನ್ನನ್ನು ಬಾಯಿಗೆ ಬಂದಂತೆ ಅಂದು ಮನೆಯಿಂದ ತಳ್ಳಿದ್ದಾನೆ.!"

"ಯಾರು? ಎಲ್ಲವನ್ನೂ ಬಿಚ್ಚಿ ಹೇಳುವಿಯಾ?"

"ಈ ದೇಶಕ್ಕೆ ಬಂದು ಸಮ್ರಾಟನಾಗಿ ಬಿಟ್ಟಿದ್ದಾನೆ–ಅಂಥವನ ಹೆಸರನ್ನು ತಾವು ಕೇಳಿರಬಹುದಲ್ಲವೆ?"

"ಹಾಂ, ಸ್ವಲ್ಪ ಸ್ವಲ್ಪ ಕೇಳಿದ್ದೇನೆನ್ನು."

"ಅವನನ್ನು ಕಾಣಲಿಚ್ಛಿಸುವಿರಾ?"

"ರಾತ್ರಿ ಅಷ್ಟೇನು ಹೆಚ್ಚಾಗಿದೆಯೆ?"

"ಸರಿ; ಹಾಗಾದರೆ ತಮಗೆ ಬೇಕಾಗಿಲ್ಲ. ಒಳ್ಳೇದು, ನನ್ನ ಸಂಗಡ ಬನ್ನಿ. ಬಲು ಝಟಾಪಟಿ ಮನುಷ್ಯ, ಹಿಡಿದದ್ದನ್ನು ಆಗಲೇ ಮುಗಿಸಿಬಿಡುತ್ತಾನೆ. ಸಮಯ ತೀರ ಸ್ವಲ್ಪವಿದೆ. ವಿಶೇಷವಾಗಿ, ಅವನು ತಮ್ಮ ತರುಣಿ ಮೈತ್ರಿಣಿಯ ಕಣ್ಣುಗಳನ್ನು ಕಳೆಯುವುದು ಅಸಹನೀಯ. ಹುಡುಗಿ ಅತ್ಯಂತ ಸುಂದರಿ!"

"ಆ ತರುಣಿ ಯಾರು?"

"ತಮ್ಮ ಪರಿಚಿತಳೇ, ಹೆಲ್ಲರ ಹೆಂಡತಿ ಅವಳನ್ನು ಅವರು ಹಿಡಿದೊಯ್ದಿದ್ದಾರೆ"

"ನಿಜವೆ? ನೀನು ಚೆನ್ನಾಗಿ–ಬಲ್ಲೆಯಾ?"

"ಕಣ್ಣಾರೆ ಕಂಡದ್ದು ಸುಳ್ಳಿದ್ದೀತೆ? ಆ ಸುಂದರಿಗಾಗಿ ನಾನು ನನ್ನ ಪ್ರಾಣವನ್ನು ಕೊಡಲು ಸಿದ್ಧನಿದ್ದೆ; ಆದರೆ ಅದರಿಂದೇನೂ ಲಾಭವಾಗುತ್ತಿರಲಿಲ್ಲ."

"ಇದನ್ನೆಲ್ಲ ನೀನು ಹೇಗೆ ತಿಳಿದುಕೊಂಡೆ?"

"ಒಂದು ಸ್ಕಾಯ್‌ಲೈಟಿನ ಕಿಂಡಿಯೊಳಗಿಂದ ನೋಡಿದರೆ ತಮಗೆಲ್ಲವೂ ಕಾಣುವುದು, ಕೇಳುವುದು.

ಅವನ ಆಂತರಿಕತೆಯನ್ನು ನಂಬದಿರಲಾಗಲಿಲ್ಲ. "ಒಳ್ಳೇದು, ನಡೆ" ಬ್ಲೇಕ್ ಕಿಂಚಿತ್ ಉತ್ಸಾಹಭರದಿಂದಲೇ ನುಡಿದರು.

ಬಿಲ್ ಮಿಲರ್ ಮುಂದೆ ನಡೆದ, ಬ್ಲೇಕ್ ಅವನನ್ನು ಹಿಂಬಾಲಿಸಿದರು. ಹೋಗುತ್ತಿರುವಾಗ ಬ್ಲೇಕರಿಗೆನಿಸುತ್ತಿತ್ತು–ತಾವು ಮಾಡುತ್ತಿರುವುದು ಉಚಿತವೇ? ಮಿಲರ್ ಸಜ್ಜನನಲ್ಲ, ಒಂದು ಚೋರದಳದ ನಾಯಕ. ಅವನ

ತಂದೆ ಯಾರೋ ಗೊತ್ತಿಲ್ಲ ಯಾರಿಗೂ; ಅವಳ ತಾಯಿ ವಿವಾಹಿತಳೋ ಗೊತ್ತಿಲ್ಲ. ಅವನು ಹುಟ್ಟಿದ್ದು ಒಂದು ಅನಾಥಾಶ್ರಮದಲ್ಲಿ, ಶೈಶವದಿಂದಲೂ ಬೆಳೆದದ್ದು ಕುಸಂಸರ್ಗದಲ್ಲಿ. ಅನಂತರ ಚೋರ ತಸ್ಕರರ ಅಧಿಪತಿಯಾದ. ಅವನ ಪರಿಚಯ ಬ್ಲೇಕರಿಗಿದ್ದುದು ಬುಲ್‌ಡಾಗ್ ಎಂಬ ಕಳ್ಳರ ತಂಡದ ಹಿರಿಯನೆಂದು ಮಾತ್ರ; ಅವನ ಇತರ ಅನೇಕ ಗುಣಗಳನ್ನೂ ಅವರು ಅರಿತಿದ್ದರು.

ತನಗಿಂತ ಬಲಿಷ್ಠನಿಂದ ಅಪಮಾನ ಹೊಂದಿ ಬಿಲ್‌ಮಿಲರ್ ಅದರ ಸೇಡುತೀರಿಸಿಕೊಳ್ಳಲು ಉದ್ಯುಕ್ತನಾಗಿರುವುದು ಅವನ ಮಾತಿನಿಂದಲೇ ಬ್ಲೇಕರಿಗೆ ತಿಳಿದಿತ್ತು. ಅದಕ್ಕಾಗಿ ಅವನು ಅವರ ಸಹಾಯವನ್ನಪೇಕ್ಷಿಸುತ್ತಿದ್ದಾನೆ. ಆದರೆ ಸಹಾಯ ಪ್ರಾರ್ಥನೆ ಆಂತರಿಕವೇ ಅಲ್ಲವೇ ಎಂಬ ವಿಷಯದಲ್ಲಿ ಅವರ ಸಂದೇಹ ದೂರಾಗಲಿಲ್ಲ. ಎರಡು ದಸ್ಯು ಪಂಗಡಗಳಲ್ಲಿ ಜಗಳ ಹುಟ್ಟಿದರೆ ಅವರು ತಾವೇ ಅದರ ತೀರ್ಮಾನಮಾಡಿಕೊಳ್ಳುತ್ತಾರೆ; ಮೂರನೆಯವರ ಸಹಾಯವನ್ನು ಕೇಳುವುದಿಲ್ಲ; ಅದರಲ್ಲೂ ಪತ್ತೇದಾರರ ನೆರವನ್ನು ಕೋರುವುದಂತೂ ಅಸಂಭವವೇ. ಈ ವಸ್ತುಸ್ಥಿತಿಯನ್ನರಿತಿದ್ದ ಬ್ಲೇಕರಿಗೆ ಮಿಲರನ ಈ ಅಭಿನಯವು ತಮ್ಮನ್ನು ಜಾಲದಲ್ಲಿ ಕೆಡಹುವ ಛಲವಿರಲೂಬಹುದೆಂದು ಸಹಜವಾಗಿಯೆ ಶಂಕೆಯುಂಟಾಯಿತು. ಆದರೆ ಅವನ ಮಾತುಗಳು ಪೂರ್ಣವಾಗಿ ವಿಶ್ವಾಸಕ್ಕೆ ಅಯೋಗ್ಯವೆಂದೂ ಅವರಿಗೆನಿಸಲಿಲ್ಲ. ಇಲಿನಳು ತಸ್ಕರ ತಂಡದ ಕೈಗೆ ಸಿಕ್ಕುಬೀಳುವ ಸಂಭವ ನೂರಕ್ಕೆ ನೂರರಷ್ಟಿತ್ತು; ಅದನ್ನು ಬ್ಲೇಕರ ಮನಸು ಅಲ್ಲಗಳೆಯಲಿಲ್ಲ. ಅದನ್ನು ಮಿಲರ್ ಹೇಗೋ ಅರಿತುಕೊಂಡಿದ್ದಾನೆಂಬುದನ್ನು ಸುಳ್ಳೆಂದು ಹೇಗೆ ಹೇಳಬೇಕು? ಇಂಥ ಪರಿಸ್ಥಿತಿಯಲ್ಲಿ ಸತ್ಯಶೋಧನೆಗಾಗಿ ಕಲ್ಪನಾತೀತ ವಿಪತ್ತುಗಳಿಗೆ ಎದೆಯೊಡ್ಡುವುದೇ ಲೇಸೆಂದು ಅವರು ನಿರ್ಧರಿಸಿದರು.

ಬಿಲ್ ಮಿಲರನನ್ನು ಹಿಂಬಾಲಿಸಿ ಯುಸ್ಟನ್ ರೋಡಿನಿಂದ ಒಂದು ಸಂದಿಯಲ್ಲಿ ಹೊರಳಿ, ಬ್ಲೇಕರು ಒಂದು ಅಂಗಡಿಯ ಮುಂದೆ ಹೋಗಿ ನಿಂತರು. ಆ ಅಂಗಡಿಗೆ ಸ್ವಲ್ಪ ದಿನಗಳ ಹಿಂದೆಯೇ ಸುಣ್ಣ ಹಚ್ಚಲಾಗಿತ್ತು.

"ಇದೇ ಆ ಸ್ಥಳ. ಈ ಮನೆಯೊಳಗೆ ಪ್ರವೇಶಿಸುವ ಮೊದಲು ತಮ್ಮ ಸಹಾಯ ಸ್ವಲ್ಪ ಬೇಕು." ಎಂದ ಮಿಲರ್.

ಬ್ಲೇಕ್ ಒಪ್ಪಿದರು. ಮಿಲರ್ ಬೆರಳಿಂದ ಕದವನ್ನು ಬಡಿದ. ತತ್‌ಕ್ಷಣವೇ ಬಾಗಿಲು ಕೊಂಚ ತೆರೆಯಿತು. ಒಳಗಿಂದ ಒಬ್ಬ ಮನುಷ್ಯ ಮೋರೆ ಚಾಚಿ ಸುತ್ತಲೂ ಸಂದಿಗ್ಧ ದೃಷ್ಟಿಯಿಂದ ನೋಡಿ, ಮಿಲರನನ್ನು ಕಂಡು ಅಸ್ಫುಟ ಸ್ವರದಲ್ಲಿ ಕೇಳಿದ: "ನೀನೇ?"

ಬಾಯೊಳಗಿನ ಮಾತು ಬಾಯೊಳಗಿರುವಾಗಲೇ ಬಿಲ್ಲನು ಅವನನ್ನು ಉಡದ ಹಿಡಿತದಿಂದ ಹೊರಕ್ಕೆಳೆದನು. ದ್ವಾರಪಾಲಕನು ಈ ಎಳೆತದ ಜೋಲಿಯನ್ನು ಹಿಡಿಯುವುದರೊಳಗಾಗಿಯೇ ಮಿಲರ್ ಅವನನ್ನು ನೆಲಕ್ಕೆ ಕೆಡವಿ ಅವನ ಎದೆಯ ಮೇಲೆ ಕುಳಿತನು. ಮತ್ತು ಅವನ ಕತ್ತನ್ನು ಒತ್ತಿ ಹಿಡಿದು, ''ನನ್ನ ಜೇಬಿನಲ್ಲಿ ಹಗ್ಗವಿದೆ; ತಕ್ಕೊಂಡು ಬೇಗನೆ ಇವನ ಕೈಕಾಲು ಕಟ್ಟಿರಿ ಒಡೆಯರೆ," ಎಂದು ಬ್ಲೇಕರಿಗೆಂದ.

ಕತ್ತನ್ನೊತ್ತಿದ್ದರಿಂದ ದ್ವಾರಪಾಲಕನು ಬಾಯಿ ತೆರೆದು ಕೂಗಿಕೊಳ್ಳಲು ಹವಣಿಸಿದ ಅದನ್ನು ಕಂಡು ಮಿಲರ್ ಅವನ ಬಾಯನ್ನು ಒತ್ತಿ ಹಿಡಿಯಲು ಪ್ರಯತ್ನಿಸಿದ. ಆಗ ದ್ವಾರಪಾಲನು ಅವನ ಬೆರಳನ್ನು ಕಚ್ಚಿದ. ಅವನ ಹಲ್ಲು ಎಷ್ಟು ಹದನ, ಎಷ್ಟು ಅವನ ದವಡೆಯ ಕಸುವು! ಬಿಲ್ ಆರ್ತನಾದಗೈದ: ''ನನ್ನ ಬೆರಳು ಕತ್ತರಿಸಿಹೋಯಿತು ಒಡೆಯಾ! ಬೇಗ ಕಟ್ಟಿರಿ ಇವನನ್ನು!''

ಮೋರೆಗೆ ಒಂದೇಟು ಕೊಟ್ಟಾಗ ದ್ವಾರರಕ್ಷಕ ಮಿಲರನ ಬೆರಳನ್ನು ಬಿಟ್ಟ. ಬ್ಲೇಕ್ ಮಿಲರ್ ಕೂಡಿ ತ್ವರೆಯಿಂದ ಅವನ ಕೈಕಾಲುಗಳನ್ನು ಬಿಗಿದರು. ಬಳಿಕ ಅವನ ಬಾಯಲ್ಲಿ ಅರಿವೆಯ ಉಂಡೆಮಾಡಿಟ್ಟು, ಅವನನ್ನೆತ್ತಿ ಒಯ್ದು ಬಾಗಿಲೊಳಗಡೆ ಮೂಲೆಯಲ್ಲಿ ಹಾಕಿದರು.

ಮಿಲರ್ ಬಾಗಿಲಿಕ್ಕಿ ನಿಮ್ನಸ್ವರದಲ್ಲಿ, "ಮೆಲ್ಲನೆ ಹೆಜ್ಜೆಯಿಡಿರಿ, ಹಲಗೆಯ ಮೇಲೆ ಕಾಲಸದ್ದಾದೀತು" ಎಂದು ನುಡಿದ.

ಎಲ್ಲೆಲ್ಲಿಯೂ ಬೆಳಕಿಲ್ಲ; ಮನೆಯಲ್ಲೆಲ್ಲ ಸೂಚಿಭೇದ್ಯ ಅಂಧಕಾರ. ಎಲ್ಲಿಯೂ ಏನೂ ಕಾಣಿಸದು. ಮಿಲರನಿಗೆ ಆ ಮನೆ ಗೊತ್ತಿನದು. ಅವನು ಬ್ಲೇಕರನ್ನು ಕೈಹಿಡಿದು ಆ ಕತ್ತಲಲ್ಲಿ ಎಳೆದುಕೊಂಡು ಮುಂದುವರಿದ. ಅವರು ಇನ್ನೊಂದು ಕೈಯಿಂದ ತಮ್ಮ ಜೇಬಿನಲ್ಲಿಯ ಪಿಸ್ತೂಲಿನ ಕುದುರೆ ಹಿಡಿದುಕೊಂಡು ಸಾಗಿದರು. ಅವರು ಒಂದು ದೀರ್ಘಪಥವನ್ನು ಅತಿಕ್ರಮಿಸಿದರು. ತಮ್ಮ ವಿಪತ್ತು ಹೆಜ್ಜೆ ಹೆಜ್ಜೆಗೂ ಘನೀಭೂತವಾಗುತ್ತಿದೆ ಎಂಬುದನ್ನು ಬ್ಲೇಕ್

ತಿಳಿದುಕೊಂಡರು ಯಾರೊಡನಾದರೂ ಹೊಡೆದಾಡುವುದು ಮಿಲರನ ಉದ್ದೇಶವಾಗಿದ್ದರೆ, ತನ್ನ ತಂಡದ ಯಾರನ್ನಾದರೂ ಸಹಾಯಕ್ಕೆ ಕರೆದು ತಾರದೆ ನನ್ನನ್ನೇಕೆ ಕರೆದುಕೊಂಡು ಬಂದ? ಎಂದು ಬ್ಲೇಕ್ ವಿಚಾರಮಾಡ ತೊಡಗಿದರು. ದೂರ ದೂರ ಮುಂದುವರಿದಂತೆ ಅವರ ಸಂದೇಹ ಉತ್ಕಂಠೆ ಗಳು ಹೆಚ್ಚುತ್ತಲಿದ್ದವು. ಬಾಗಿಲ ಕಾಯುವವನನ್ನು ಬಿಲ್ ಕಟ್ಟಿಹಾಕಿ ದ್ದೇನೋ ನಿಜ; ಆದರೆ ಅದೆಲ್ಲ ನನ್ನನ್ನು ಮೋಸಗೊಳಿಸುವುದಕ್ಕಾಗಿ ರಚಿಸಿದ ಕಪಟತಂತ್ರ ಏಕಿರಲಾರದು?

ಮಿಲರ್ ಒಂದು ಕಡೆ ತಟ್ಟನೆ ನಿಂತು, ಬ್ಲೇಕರ ಅಂಗೈಯನ್ನೊತ್ತಿ ಜಾಗರೂಕರಾಗಿರುವಂತೆ ಸೂಚಿಸಿದ. ಇನ್ನೊಂದು ಕೈಯಿಂದ ಎದುರಿನ ಕೋಣೆಯ ಬಾಗಿಲಿನ ಹ್ಯಾಂಡಲನ್ನು ಕತ್ತಲಲ್ಲಿ ಹುಡುಕತೊಡಗಿದ.

ಮರುಕ್ಷಣದಲ್ಲಿ ಕೋಣೆಯ ಬಾಗಿಲು ತೆರೆಯಿತು. ಆ ಕೋಣೆಯಲ್ಲಿ ಝಗಝಗ ಬೆಳಕು. ಬಿಲ್ ಮಿಲರ್ ಬ್ಲೇಕರನ್ನು ಹಿಂದಿನಿಂದ ಕೋಣೆ ಯೊಳಕ್ಕೆ ತಳ್ಳಿದ. ಕೂಡಲೆ ಒಳಗಿದ್ದ ದೈತ್ಯನಂತಹ ಜೋಣಪ ಮನುಷ್ಯ ಬಾಗಿಲ ಹೊರಳಿ, "ಬ್ಲೇಕರನ್ನು ಹಿಡಿದು ತಂದೆಯಾ?" ಎಂದು ಕೇಳಿದ.

ಕೇಳಿದವನು ಸ್ವಯಂ ಸಿಜಾರೆ. ಕೇಳಿದ್ದು ಯಾರನ್ನೋ ಅವನೆಲ್ಲಿ? ಬ್ಲೇಕರೊಬ್ಬರೇ ನಿಂತಿದ್ದಾರೆ ಎದುರಿಗೆ. ಕಂಡೊಡನೆಯೇ ಬ್ಲೇಕ್ ಗುರುತಿ ಸಿದರು: ಅಂದೇ ಕೆಫೆಯ ಬಾಗಿಲಲ್ಲಿ ನಿಂತಿದ್ದವನು ಈ ದೈತ್ಯನೇ. ಅವರು ದೃಢವಾಗಿ ಹೆಜ್ಜೆಯಿಕ್ಕುತ್ತ ಅವನೆದುರಿಗೆ ಹೋಗಿ,

"ಹೌದು ನಾನು ಬಂದಿದ್ದೇನೆ; ಏನು ಬೇಕು?"

ಸಿಜಾರೆ ತೀವ್ರದೃಷ್ಟಿಯಿಂದ ಅವರ ಮೋರೆ ನೋಡಿದ,—ಕ್ಷಣಮಾತ್ರ. ಬಳಿಕ ಅವರು ಬಂದ ಬಾಗಿಲ ಕಡೆಗೆ ನೋಡಿದ. ಅವನ ಕಣ್ಣುಗಳಲ್ಲಿ ವಿಸ್ಮಯ—ಸಂದೇಹಗಳು ಒಡಮೂಡಿದವು.

ಸಿಜಾರೆಯ ಪಕ್ಕದಲ್ಲಿ ಬ್ಲೇಕರ ಜಾಕೀಟು ಬಿದ್ದಿತ್ತು; ಸನಿಯದ ಒಂದು ಕುರ್ಚಿಯಲ್ಲಿ ಇಲಿನಳು ರಜ್ಜುಬದ್ಧಳಾಗಿರುವುದನ್ನು ಅವರು ಕಂಡರು.

"ಏಡಿ—ಏಡಿ ಲುಯಿಗಿನಿ, ಎಲ್ಲಿದ್ದೀ?—ನೀನು ನನ್ನೊಡನೆ—" ಸಿಜಾರೆ ಕೂಗಿದ ಗಂಭೀರ ಧ್ವನಿಯುಲ್ಲಿ.

ಅವನ ಮಾತು ಮುಗಿಯುವಷ್ಟರಲ್ಲಿ ಬ್ಲೇಕ್ ತಮ್ಮ ಪಿಸ್ತೂಲನ್ನು

ಅವನ ಹಣೆಗೆ ಗುರಿಯಿಟ್ಟು ದೃಢಸ್ವರದಲ್ಲಿ ಹೇಳಿದರು. "ತತ್‌ಕ್ಷಣ ಎರಡೂ ಕೈಗಳನ್ನು ಮೇಲಕ್ಕೆತ್ತು!"

ಬ್ಲೇಕ್ ಒಮ್ಮೆಲೆ ಪಿಸ್ತೂಲಿನ ಗುರಿಯಿಟ್ಟುದರಿಂದ ಸಿಜಾರೆಗೆ ತನ್ನ ಜೇಬಿನ ಕಡೆ ಕೈಯೊಯ್ಯುವುದಕ್ಕೂ ಅವಕಾಶ ಸಿಕ್ಕಲಿಲ್ಲ. ತನ್ನ ಆದೇಶ ವನ್ನು ನಡೆಸುವುದರಲ್ಲಿ ಏನೋ ತಪ್ಪಾಗಿದೆ ಎಂದು ಅವನಿಗೆ ತಿಳಿದು ಹೋಯಿತು. ಬ್ಲೇಕ್ ಸ್ವರಕ್ಷಣೆಯ ಸಿದ್ಧತೆಯಲ್ಲಿ ಬರುವರೆಂದು ಅವನೆಣಿಸಿರ ಲಿಲ್ಲ; ಅವರನ್ನು ವಂಚಿಸಿ ತರುವೆನೆಂದು ಉಯಿಗಿನಿ ಜಂಬುಕೊಚ್ಚಿಕೊಂಡು ಹೋಗಿದ್ದ. "ನಿಮಗೇನು ಬೇಕಾಗಿದೆ?" ಸಿಜಾರೆ ಬ್ಲೇಕರ ಮುಖ ನೋಡುತ್ತ ಕೇಳಿದ.

ಮೊದಲು ಬೇಕು, ನನ್ನ ಜಾಕೀಟು, ಅದನ್ನು ನನ್ನ ಕಡೆ ಬಿಸುಟು. ಆದರೆ ಜೇಬಿಗೆ ಕೈಗಿಯ್ ಹಾಕಲು ಪ್ರಯತ್ನಿಸಿದರೆ ನನ್ನ ಪಿಸ್ತೂಲಿನ ಕುದುರೆ ಹಾರಿತೆಂದು ತಿಳಿ."

ಸಿಜಾರೆ ಪ್ರತಿವಾದಿಸದೆ ಎಡಗೈಯಿಂದ ಜಾಕೀಟನ್ನೆತ್ತಿಕೊಂಡ. ಬ್ಲೇಕ್ ಎವೆಯಿಕ್ಕದೆ ಅವನ ಕೈಯನ್ನೇ ನೋಡುತ್ತಿದ್ದರು. ಬಿಲ್ ಮಿಲರ್ ಕೋಣೆ ಯಲ್ಲಿಲ್ಲದ್ದನ್ನು ಕಂಡು ಅವರ ಮನಸಿಗೆ ಕೊಂಚ ಬೇಜಾರವಾಯಿತು. ಮತ್ತೆ ಲ್ಲಿಯಾದರೂ ಅವನಿರುವನೋ ಎಂದು ಅತ್ತಿತ್ತ ನೋಟ ಹೊರಳಿಸಿ ನೋಡುವ ಸಾಹಸಕ್ಕೆ ಅವರು ಬೀಳಲಿಲ್ಲ.

ಸಿಜಾರೆ ಜಾಕೀಟನ್ನು ಬ್ಲೇಕರ ಮೋರೆಯ ಮೇಲೆ ಎಸೆದ. ಅವರು ಅವನ ಮನೋಗತವನ್ನರಿತು ಸರಕ್ಕನೆ ಅದನ್ನು ಎಡಗೈಯಿಂದ ಹಿಡಿದು ಕೊಂಡು, ಸಮೀಪದ ಮೇಜಿನ ಮೇಲಿಟ್ಟು "ನಾನೀಗ ನಿನ್ನ ಜಾಲದಲ್ಲಿ ಕೆಡ ಹಲ್ಪಟ್ಟಿಲ್ಲ ಜೇನಾ! ಆದರೂ ನೀನು ಇಲ್ಲಿಗೆ ತರಿಸುವ ಏರ್ಪಾಡು ಮಾಡಿದ್ದು ನನಗೆ ಗೊತ್ತಾಗದೆ ಇಲ್ಲ." ಎಂದು ಆ ಬಾಗಿಲನ್ನಿಕ್ಕುವ ಉದ್ದೇಶದಿಂದ ಅತ್ತ ಸರಿದರು. ಈಗಲೂ ಮಿಲರ್ ಕೋಣೆಯಲ್ಲಿಲ್ಲ. 'ನನ್ನನ್ನು ಈ ಕುತ್ತದಲ್ಲಿ ತಳ್ಳಿ ಅವನು ಪ್ರಾಣಭಯದಿಂದ ಓಡಿಹೋಗಲಿಲ್ಲವಷ್ಟೆ?' ಎಂದು ಮನಸಿನಲ್ಲಿ ಎಂದುಕೊಂಡರು.

"ನನ್ನ ಖ್ಯಾತಿ ನಿಮ್ಮ ಕಿವಿಗೂ ಮುಟ್ಟಿದಂತೆ ಕಾಣುತ್ತದೆ. ನೀವು ನನ್ನನ್ನು ಬಲ್ಲಿರಾ?" ಹಲ್ಲುಕಿರಿದು ನಗುವ ಭಂಗಿಯಲ್ಲಿ ಪ್ರಶ್ನಿಸಿದ ಸಿಜಾರೆ.

"ಸಣ್ಣ ಪುಟ್ಟ ಚೋರದಲದ ನಾಯಕರ ಹೆಸರನ್ನೂ ಬಲ್ಲ ನನಗೆ ನಿನ್ನಂಥ ಚೋರಪ್ರಪಂಚದ ಸಾರ್ವಭೌಮರ ಹೆಸರು ಗೊತ್ತಿರದೆ? ಸಿಜಾರೆ ಜೇನಾ ತಾನೆ?"

ಗೋಣುಹಾಕಿ ಹೌದೆಂದು ಸೂಚಿಸಿದ ಸಿಜಾರೆ. ಆದರೆ ಅವನ ಮುಖದಲ್ಲಿ ಕೊಂಚವೂ ಪ್ರಸನ್ನತೆಯ ಚಿಹ್ನೆ ಕಂಡುಬರಲಿಲ್ಲ ಬ್ಲೇಕರಿಗೆ. ಅವನು ಸ್ವಲ್ಪ ವ್ಯಾಕುಲನಾಗಿದ್ದಾನೆಂದು ಅವರಿಗೆನಿಸಿತು. ತಾವು ಇಲ್ಲಿಗೆ ಬರುವುದು ಅವನಿಗೆ ಗೊತ್ತಿದ್ದರೂ ಆತ್ಮರಕ್ಷಣೆಗೆ ಸಿದ್ಧರಾಗಿ ಬಂದಿರುತ್ತಾರೆ, ಒಮ್ಮೆಲೆ ಅವರ ಆಕ್ರಮಣಕ್ಕೆ ತಾನು ಈಡಾಗುತ್ತೇನೆ ಎಂದು ಅವನು ತಿಳಿದಿರಲಿಲ್ಲವಾದ್ದರಿಂದ ಅವನ ದೃಷ್ಟಿಯಲ್ಲಿ ಉದ್ವೇಗ ಕಂಡುಬರುತ್ತಿದೆ ಎಂದು ಅವರರಿತುಕೊಂಡರು.

ಆದರೆ ತಮ್ಮ ಮೇಲೆ ಒಮ್ಮೆಲೆ ಯಾವ ಸಂಕಟ ಒದಗಬಹುದೆಂಬುದನ್ನು ಬ್ಲೇಕ್ ಊಹಿಸಿ ಅರಿಯದಾದರು. ಅತರ್ಕಿತ ರೀತಿಯಿಂದ ಅವರು ವಿಪತ್ತಿಗೀಡಾಗುವ ಭಯವಿತ್ತು. ಮಿಲರನ ನೆರವಿನ ಭರವಸೆ ಹಿಡಿಯಲು ಬರುವಂತಿಲ್ಲ. ಅವನು ತಮ್ಮನ್ನು ಇಲ್ಲಿಗೆ ಕರೆತಂದ ಉದ್ದೇಶವೇ ತಿಳಿಯದ್ದರಿಂದ ಅವರ ಮನಸು ಸಂಶಯಗ್ರಸ್ತವಾಗಿತ್ತು. ತಾವು ಇತ್ತ ಸಿಜಾರೆಗೆ ಎದುರಾಗಿ ಅವನ ಆಕ್ರಮಣವನ್ನು ನಿವಾರಿಸುತ್ತಿರುವಾಗ ಹಿಂದಿನಿಂದ ಯಾರಾದರೂ ತಮ್ಮ ಮೇಲೆ ಗುಂಡು ಹಾರಿಸಲೂ ಬಹುದು ಭಯವಿತ್ತು. ಹಿಂದೆ ಮುಂದೆ ಎರಡೂ ಕಡೆ ವಿಪತ್ತು. ಹಿಂದಿನ ಯಾವುದೋ ಒಂದು ಕೋಣೆಯಿಂದ ಏಕಾಧಿಕ ಜನರ ಗುಜುಗುಜು ಅವರ ಕಿವಿಗೆ ಬೀಳುತ್ತಿತ್ತು. ಸಿಜಾರೆಯ ಅನುಚರರು ಅದೂರದಲ್ಲಿ ಕಾಯ್ದುಕೊಂಡಿದ್ದಾರೆಂಬಲ್ಲಿ ಅವರಿಗೆ ಸಂದೇಹವುಳಿಯಲಿಲ್ಲ. ಆದರೆ ಸಿಜಾರೆ ಅವರನ್ನು ಕೊಗುವ ಸಾಹಸ ಮಾಡಬಹುದೆ?

"ಸಣ್ಣ ದನಿಯಲ್ಲಿ ಮಾತನಾಡು, ಸಿಜಾರೆ"

"ನಾನು ಹೆಂಗುಸಲ್ಲ ಮಿ. ಬ್ಲೇಕ್ ಬಹುಜನರನ್ನು ತನ್ನಾಜ್ಞೆಯಂತೆ ನಡೆಯಿಸುವವರಿಗೆ ಮೃದುಸ್ವರದಲ್ಲಿ ಮಾತನಾಡುವ ಅಭ್ಯಾಸವಿರುವುದಿಲ್ಲ.— ಹಾಂ, ನಾನೇ ನಿಮ್ಮನ್ನು ಬರಮಾಡಿಕೊಂಡದ್ದು."

"ಅದನ್ನೇನು ಕೇಳಿ ತಿಳಿದುಕೊಳ್ಳಬೇಕಾಗಿಲ್ಲ. ಆದರೆ ಏಕೆ ಎಂದು

ಕೇಳಬಹುದೆ?"

ಜಾಕೀಟಿನ ಕಡೆಗೆ ಬೆರಳು ಮಾಡಿ ಸಿಜಾರೆ ಉತ್ತರವಿತ್ತ: "ಇದು ಒಬ್ಬ ನನ್ನ ಅನುಯಾಯಿಗೆ ದಾರಿಯಲ್ಲಿ ಸಿಕ್ಕಿತ್ತು—ಶೋಧಿಸಿ ನೋಡಿದಾಗ ಜಾಕೀಟು ನಿಮ್ಮದೆಂದು ಗೊತ್ತಾಯಿತು. ಇದನ್ನು ನಿಮಗೆ ತಿರುಗಿ ಮುಟ್ಟಿಸುವ ವಿಚಾರದಿಂದ ಕರೆಸಿದೆ."

"ರಾತ್ರಿಯ ಕೊನೆಯ ಯಾಮದಲ್ಲಿ ಮಾಲಿಕನ ಕಳೆದ ಮಾಲನ್ನು ತಿರುಗಿ ಕೊಡುವ ಅಪೇಕ್ಷೆಯಾದದ್ದು ಸಾಧು ಲಕ್ಷಣವೇ ಸರಿ! ಇದಕ್ಕೆ ಬೇರೆ ಏನಾದರೂ ಕಾರಣವಿದ್ದರೆ ಅನುಮಾನಿಸುವುದು ಅಸಾಧ್ಯ ನನಗೆ."

"ಕಾರ‍್ಯತತ್ಪರ ಮನುಷ್ಯ ನಾನು—ಯಾವಾಗಿನ ಕೆಲಸ ಅವಾಗಲೇ ಆಗಬೇಕು. ಇದು ನನ್ನ ಅಭ್ಯಾಸ. ಘನಿಷ್ಠ ಸಂಬಂಧದ ಸುಯೋಗ ಪ್ರಾಪ್ತವಾದರೆ ನನ್ನ ಈ ಅಭ್ಯಾಸದ ಪರಿಚಯ ಕ್ರಮಶಃ ಆದೀತು." ಕೆಮ್ಮಿ ಕೊರಳು ಸರಿಮಾಡಿಕೊಂಡು ಸಿಜಾರೆ ಉತ್ತರವಿತ್ತ.

"ಅಂಥ ಸುಯೋಗ ಒದಗಿಸಬೇಕೆಂದು ನನ್ನಲ್ಲಿಗೆ ಕರೆಸಿಕೊಂಡೆಯಲ್ಲವೆ? ಜಾಕೀಟನ್ನು ಕೊಡುವುದೇ ಉದ್ದೇಶವಾಗಿದ್ದರೆ ನಮ್ಮ ಮನೆಗೆ ಅನಾಯಾಸವಾಗಿ ಕಳಿಸಬಹುದಾಗಿತ್ತು. ಆದರದು ನಿಷ್ಪ್ರಯೋಜಕವೆಂದು ಎನಿಸಿರಬೇಕು."

"ಹಾಂ, ನಿಮ್ಮ ಮನೆಗೆ ಕಳಿಸುವುದು ಸಾಧ್ಯವಿತ್ತೆಂಬುದನ್ನು ಒಪ್ಪುತ್ತೇನೆ; ಹಾಗೆ ಮಾಡಿದ್ದರೆ ನಿಮ್ಮ ಪರಿಚಯಕ್ಕೆ ನಾನು ಎರವಾಗುತ್ತಿದ್ದೆ; ಈ ಲಾಭವನ್ನು ಕಳೆದುಕೊಳ್ಳುವುದು ನನಗಿಷ್ಟವಿರಲಿಲ್ಲ. ನಾವಿಬ್ಬರಲ್ಲೂ ಘನಿಷ್ಠತೆ ಇಬ್ಬರ ಸ್ವಾರ್ಥಕ್ಕೂ ಅನುಕೂಲ, ಕಲ್ಯಾಣಕರ. ನನ್ನ ಮಾತು ತುಟಿ ತುದಿಯ ಮಾತಲ್ಲ, ಅಂತರಂಗದ ಮಾತು. ಕ್ಷಿಪ್ರದಲ್ಲಿಯೇ ಇದು ನಿಮಗೆ ಗೊತ್ತಾಗುವುದು."

ಸಿಜಾರೆಯ ಮಾತಿನ ಮರ್ಮವು ಬ್ಲೇಕರಿಗೆ ತಿಳಿಯಿತು. ಹಿಂದಕ್ಕೆ ಎಷ್ಟೋ ದಸ್ಯು ದಲಪತಿಗಳೂ ಇಂತಹ ಮಾತುಗಳನ್ನಾಡಿದ್ದರು. ಅವರು ಕುತೂಹಲವಶದಿಂದ ಜಾಕೀಟನ್ನೆತ್ತಿಕೊಂಡು ನೋಡಿದರು. ಅದರ ಕೆಳಬದಿಯ ಜೇಬಿನಲ್ಲಿ ಏನೋ ಭಾರವಾದ ವಸ್ತುವಿರುವಂತೆ ಎನಿಸಿತು. ಏನೆಂದು ಹೊರತೆಗೆದರು. ತೊವಲಿನ ಚೀಲ. ಅದರಲ್ಲಿ ಒಂದು ಸಿವುಡು ನೋಟುಗಳು.

ಎಷ್ಟು ಸಾವಿರದವಿರಬಹುದೆಂದು ಅಂದಾಜಿಸುವುದು ಅಸಾಧ್ಯವಾಗಿತ್ತು; ಎಣಿಸಿನೋಡುವ ಇಚ್ಛೆಯೂ ಬ್ಲೇಕರಿಗಾಗಲಿಲ್ಲ.

"ಈಗ ನಿಮಗೆ ಗೊತ್ತಾಗಿರಲು ಸಾಕು—ನಾನು ಅಸಜ್ಜನನಲ್ಲ" ಬ್ಲೇಕ್ ನೋಟುಗಳನ್ನು ನೋಡಿದರೆಂಬುದನ್ನರಿತು ಸಿಜಾರೆ ನುಡಿದ: "ನಿಮ್ಮ ಗೆಳೆತನ ಮಾಡಲು ನನ್ನಲ್ಲಿ ಕಿಂಚಿತ್ ಯೋಗ್ಯತೆಯೂ ಇದೆ ಎಂಬುದನ್ನು ನೀವು ಒಪ್ಪುತ್ತೀರೆಂದು ನನ್ನ ನಂಬಿಗೆ. ನಿಮ್ಮ ಜಾಕೀಟಿನಲ್ಲಿ ಏನೇನು ಬೆಲೆ ಬಾಳುವ ವಸ್ತುಗಳಿದ್ದವೋ ಅವೆಲ್ಲ ಸರಿಯಾಗಿವೆ ಎಂಬುದನ್ನೂ ನೀವು ಮನ ಗಂಡಿರಬಹುದು."

"ಜೇಬಿನಲ್ಲಿಯ ಈ ನೋಟುಗಳು ನನ್ನವೆಂದು ನಾನೊಪ್ಪಲಾರೆ. ಕೆಳ ಬದಿಯ ಜೇಬಿನಲ್ಲಿ ಹಣವನ್ನಿಟ್ಟುಕೊಂಡು ಅಡ್ಡಾಡುವ ಅಭ್ಯಾಸವೇ ನನ ಗಿಲ್ಲ. ನನ್ನ ಜೇಬಿನಲ್ಲಿವೆ ಎಂದು ಪರಧನವನ್ನು ನನ್ನದೆನ್ನುವಂಥ ದುರಾ ಶೆಯೂ ಇಲ್ಲ. ನಾನು ಸ್ವಕಷ್ಟದಿಂದ ಮಾಡಿದ ಸಂಪಾದನೆ ಸಂಸಾರನಿರ್ವಾ ಹಕ್ಕೆ ಯಥೇಚ್ಛವಾಗಿದೆ—" ಎಂದು ಬ್ಲೇಕ್ ನೋಟಿನ ಚೀಲವನ್ನು ತಾತ್ಸಾರದಿಂದ ಸಿಜಾರೆಯ ಕಡೆಗೆಸೆದರು.

ಅವರ ಈ ತಿರಸ್ಕಾರವನ್ನು ಕಂಡು ಸಿಜಾರೆಯ ಮುಖ ಕೆಂಪಾಯಿತು. ಆದರೆ ಅತಿಕಷ್ಟದಿಂದ ಮಾನಸಿಕ ಉತ್ತೇಜನವನ್ನು ದಮನಿಸಿಕೊಂಡು ಒಣ ತುಟಿಗಳ ಮೇಲೆ ನಾಲಿಗೆಯಾಡಿಸಿದನು. ಆಮೇಲೆ ಕಣ್ಣು ತಿರುಗಿಸುತ್ತ ಅವ ನೆಂದ: "ಏನು ಮಾಡುತ್ತಿರುವಿರಿ ಮಿ ಬ್ಲೇಕ್, ಕೈಗೆ ಬಂದ ಲಕ್ಷ್ಮಿಯನ್ನು ಕಾಲಿಂದ ತಳ್ಳುತ್ತಿರುವಿರಲ್ಲ! ಹುಚ್ಚರ ಹಾಗೆ, ವ್ಯವಹಾರಜ್ಞಾನ ಇಲ್ಲದವರ ಹಾಗೆ ಮಾಡಬೇಡಿರಿ. ಈ ಚೀಲವನ್ನು ತಕ್ಕೊಳ್ಳಿರಿ; ಬೇಕಾದರೆ ಕೆಳಬದಿಯ ಜೇಬನ್ನು ಬಿಟ್ಟು ಎದೆಮೇಲಿನ ಜೇಬಿನಲ್ಲಿಟ್ಟುಕೊಳ್ಳಿರಿ. ಕೆಳಬದಿಯ ಜೇಬಿ ನಲ್ಲಿ ಹಣ ಇಡುವ ಅಭ್ಯಾಸವಿಲ್ಲ ಎಂದಿರಲ್ಲವೇ ನಿಮಗೆ? ಇಟ್ಟುಕೊಳ್ಳಿರಿ, ಎದೆಯ ಮೇಲಿನ ಜೇಬಿನಲ್ಲಿಟ್ಟುಕೊಳ್ಳಿರಿ. ನಿಮ್ಮ ಸೊತ್ತೇ ಇದು. ಈ ವಸ್ತು ವನ್ನು ತಿರಸ್ಕರಿಸುವರೆ? –ಕಳವು ಸುಲಿಗೆ, ಜಗಳ ಕೊಲೆ, ರಾಜರಾಜರಲ್ಲಿ ಯುದ್ಧ, ದಂಗೆ ಪುಂಡತನ ಎಲ್ಲವೂ ನಡೆಯುವುದು ಇದಕ್ಕಾಗಿ. ನೀವಾದರೂ ನಿಸ್ವಾರ್ಥಭಾವದಿಂದ ತುಬ್ಬುಗಾರಿಕೆ ಮಾಡುವಿರಾ? ಈ ದಪ್ಪನಾದ ನಿಮ್ಮ ಎದೆಯ ಜೇಬಿನಲ್ಲಿದ್ದರೆ ಮತ್ತೇನಾಗದಿದ್ದರೂ, ಶತ್ರುಗಳ ಪಿಸ್ತೂಲಿನ ಗುಂಡು

ನಿಮ್ಮ ಹೃತ್ಪಿಂಡವನ್ನು ಭೇದಿಸಲಾರದು."

"ಆದರೆ ನನ್ನ ವಿವೇಕ ಕರ್ತವ್ಯನಿಷ್ಠೆಗಳನ್ನು ಮುಚ್ಚಿಬಿಡುವುದು. ದುರ್ಭೇದ್ಯ ಆವರಣವಲ್ಲವೇ ಅದು?" ಎಂದರು ಬ್ಲೇಕ್ ನಗುತ್ತ.

"ಈ ನಿಶಾಂತಕಾಲದಲ್ಲಿ ನಿಮ್ಮ ವಿವೇಕ ಕರ್ತವ್ಯನಿಷ್ಠೆ ಕೊಂಚ ಕ್ಷೀಣ ವಾದರೆ ಯಾರಿಗೇನು ನಷ್ಟ? ಅದು ಅಸ್ವಾಭಾವಿಕವೂ ಅಲ್ಲ."

"ಇಲ್ಲಿ ಕೇಳು ಸಿಜಾರೆ, ನನ್ನ ಸ್ಪಷ್ಟೋಕ್ತಿಗಾಗಿ ಕೋಪಿಸಬೇಡ. ಈ ಲಂಡನಿನ ನರಕದಲ್ಲಿಯೂ ಬಂಗಾರದ ಮೋಹರೂಪಕ್ಕೆ ಬೀಳದ ಮೂರ್ಖರು ನಾಲ್ಕಾರು ಜನರಾದರೂ ಇದ್ದಾರೆ. ಆ ಸಂಖ್ಯೆ ಅಲ್ಪವಿರ ಬಹುದು, ಆದರೆ ಆ ಅಲ್ಪರಲ್ಲಿ ನಾನೊಬ್ಬ. ಅವರನ್ನು ಯಾವ ಬೆಲೆಯಿಂದಲೂ ಕೊಳ್ಳುವುದು ಸಾಧ್ಯವಿಲ್ಲ. ಅಂತಹ ಲೋಭ ನನಗಿದ್ದರೆ ಇಷ್ಟೊತ್ತಿಗೆ ಬ್ಯಾಂಕಿನಲ್ಲಿ ಲಕ್ಷಾವಧಿ ಪೌಂಡುಗಳನ್ನು ಸಂಗ್ರಹಿಸಿಡುತ್ತಿದ್ದೆ. ಆದರೆ ಹಣವನ್ನು ತಕ್ಕೊಳ್ಳುವುದಕ್ಕಾಗಿ ಹೊಲಸು ಕೊಳಚೆಯ ರೂಪದಲ್ಲಿ ನಾನೆಂದಿಗೂ ಇಳಿಯಲಿಲ್ಲ. ಇದನ್ನು ನೀನು ಹುಚ್ಚೆಂದು ಕರೆಯಬಹುದು. ಆದರೆ ಇದು ನನ್ನ ಆಜನ್ಮ ಸಂಸ್ಕಾರ."

"ಕುಸಂಸ್ಕಾರ ಎನ್ನಿರಿ. ಕುಸಂಸ್ಕಾರ ಅಡ್ಡಗೋಡೆಯಷ್ಟೆ. ಅದು ಮನುಷ್ಯನನ್ನು ಕುರುಡ ಮಾಡುತ್ತದೆ; ಅದರಿಂದ ಇನ್ನೊಬ್ಬರಿಗೂ ಪ್ರಯೋಜನವಿಲ್ಲ."

"ಲಂಚದ ಬಗ್ಗೆ ಬದ್ಧಮೂಲ ತಿರಸ್ಕಾರ ಕುಸಂಸಾರವಾಗಿದ್ದರೆ ನನಗದು ಗೌರವದ ವಿಷಯವೇ. ಈ ವಿಷಯದಲ್ಲಿ ಹೆಚ್ಚು ತರ್ಕವಿತರ್ಕದಿಂದ ಫಲವಿಲ್ಲ."

ಸಿಜಾರೆ ಮುಂದೆ ಮಾತನಾಡದೆ ಸೋತ್ಸುಕ ದೃಷ್ಟಿಯಿಂದ ಬಾಗಿಲ ಕಡೆ ನೋಡತೊಡಗಿದ.

"ಒಮ್ಮೊಮ್ಮೆ ರೋಗಕ್ಕಿಂತ ಔಷಧ ಸಾಂಘಾತಿಕವಾಗಿರುತ್ತದೆ" ಎಂದು ನುಡಿದು ಬ್ಲೇಕ್. ಸಿಜಾರೆಯ ಹಣೆಗೆ ಹಿಡಿದ ಪಿಸ್ತೂಲಿನ ಗುರಿಯನ್ನು ತಪ್ಪಿಸದೆ ಇಲಿನಳ ಹತ್ತಿರ ಸರಿದು, ಎಡಗೈಯಿಂದ ಚಾಕುವನ್ನು ತೆಗೆದು ಅವಳ ಕೈಗಳ ಬಂಧನವನ್ನು ಆದರಿಂದ ಕೊಯ್ದು, "ಇನ್ನು ಉಳಿದ ಬಂಧನಗಳನ್ನು ನೀನೇ ಕೊಯ್ದುಕೊಳ್ಳಬಹುದು" ಎಂದು ಹೇಳಿ ಚಾಕುವನ್ನು ಅವಳ

ಕೈಗಿತ್ತರು.

ಇಲಿನಳು ಒಳ್ಳೇ ಚಾಕಚಕ್ಯದಿಂದ ಉಳಿದ ಕಟ್ಟುಗಳನ್ನು ಕೊಯ್ದಳು. ಬ್ಲೇಕ್ ಮತ್ತಷ್ಟು ಸಿಜಾರೆಯ ಸಮೀಪಕ್ಕೆ ಹೋದರು. ಇಲಿನಳ ಬಿಡುಗಡೆ ಮಾಡುವುದನ್ನು ಕಂಡು ಸಿಜಾರೆ ವ್ಯರ್ಥಕೋಪದಿಂದ ಗರ್ಜಿಸಿದನು. ಅವನ ಕಣ್ಣುಗಳು ಪ್ರಜ್ವಲಿಸಿದವು. ಅದೇ ಸಮಯಕ್ಕೆ ಬ್ಲೇಕರ ಹಿಂಬದಿಯ ಬಾಗಿಲನ್ನು ತಳ್ಳಿಕೊಂಡು ಒಬ್ಬ ಯುವತಿ ಪ್ರವೇಶಿಸಿದಳು.

ಆಕೆ ಸಿಯಾರಾ.

ಅವಳನ್ನು ಕಂಡೊಡನೆಯೇ ಸಿಜಾರೆ ಕುರ್ಚಿಯಿಂದ ಜಿಗಿದೆದ್ದ. ಸಿಯಾರಾ ಒಳಗೆ ಬಂದವಳೇ ಹುಲಿಯಂತೆ ಬ್ಲೇಕರ ಮೇಲೆರಗಿ ಅವರ ಪಿಸ್ತೂಲು ಹಿಡಿದ ಕೈಯನ್ನು ಕೆಳಕ್ಕೆಳೆದಿದ್ದಳು. ತಕ್ಷಣವೇ ಸಿಜಾರೆ ಜೇಬಿನಿಂದ ತನ್ನ ಪಿಸ್ತೂಲನ್ನು ತೆಗೆದು ಬ್ಲೇಕರ ಎದೆಗೆ ಗುರಿಯಿಟ್ಟನು.

''ಪಿಟ್ರೋ, ಬೆಪ್ಪೋ, ಬೇಗ ಬರ್ರಿ! ಬೇಟೆ ಸಿಕ್ಕಿದೆ!'' ಸಿಯಾರಾ ಚೀರಿದಳು.

ಅವಳ ಮಾತು ಮುಗಿಯುವಷ್ಟರಲ್ಲಿಯೇ, ಸಿಜಾರೆ ಪಿಸ್ತೂಲಿನ ಕುದುರೆ ಒತ್ತುವ ಮೊದಲೇ ಕೋಣೆಯ ಬಾಗಿಲ ಹೊರಗಿಂದ ಪಿಸ್ತೂಲಿನ ಗುಂಡು ಸುಂಯನೆ ಬಂದು ಸಿಜಾರೆಯ ಎದೆಗೆ ಬಡಿಯಿತು ಅದರ ಆಘಾತಕ್ಕೆ ಸಿಜಾರೆ ಹಿಂದಕ್ಕೆ ನೆಗೆದ; ಆದರೆ ಬೀಳಲಿಲ್ಲ. ಪರಕ್ಷಣದಲ್ಲಿ ಇನ್ನೊಂದು ಗುಂಡು ಅವನ ಎದೆಗೆ ತಾಗಿತು. ಅದಕ್ಕೂ ಅವನು ಬೀಳಲಿಲ್ಲ. ರೇಶಿಮೆ ಶರ್ಟಿನ ಒಳಗಡೆ ಉಕ್ಕಿನ ಕವಚ ತೊಟ್ಟಿದ್ದ.

ಬ್ಲೇಕ್ ಸಿಯಾರಳನ್ನು ಅಮಾತ ಎತ್ತಿ ದೂರ ಎಸೆದರು. ಆಗ ಇಲಿನ್ ಬಂಧಮುಕ್ತಳಾಗಿ ಜೋಲಿಹೊಡೆಯುತ್ತ ಎದ್ದುನಿಂತಳು. ಅಷ್ಟರಲ್ಲಿಯೇ ಹೊರಗಿನಿಂದ ಇನ್ನೊಂದು ಗುಂಡು ಬಂದು ಸಿಜಾರೆಯ ತಲೆಯ ಮೇಲ್ಗಡೆ ಹಾಯ್ದುಹೋಯಿತು. ಸಿಜಾರೆ ಕ್ರೋಧಾಂಧನಾಗಿ ಆ ಅದೃಶ್ಯ ಶತ್ರುವನ್ನು ಆಕ್ರಮಿಸುವುದಕ್ಕಾಗಿ ಬಾಗಿಲೆಡೆಗೆ ಹಾರಿದನು. ಅದೇ ಹೊತ್ತಿಗೆ ಕೋಣೆಯ ಇನ್ನೊಂದು ಬಾಗಿಲನ್ನು ತೆರೆದುಕೊಂಡು ಮತ್ತಿಬ್ಬರು ಒಮ್ಮೆಲೆ ಒಳಗೆ ಧುಮುಕಿದರು.

ಆಗ ಬ್ಲೇಕ್ ತ್ವರೆಯಿಂದ ಒಂದು ಕೈಯಿಂದ ಇಲಿನಳ ಕೈಹಿಡಿದು,

ಇನ್ನೊಂದು ಕೈಯಿಂದ ತೂಗುತ್ತಿದ್ದ ದೀಪವನ್ನು ಗುಂಡಿಕ್ಕಿ ಒಡೆದನು. ಕೋಣೆಯೆಲ್ಲ ಒಮ್ಮೆಲೆ ಘೋರ ಅಂಧಕಾರಮಯವಾಯಿತು.

ಸಿಜಾರೆ ಭೀಕರ ಹೂಂಕಾರದೊಡನೆ ಬ್ಲೇಕರನ್ನು ಹಿಡಿಯುವುದಕ್ಕಾಗಿ ಧಾವಿಸಿ ಬಂದ. ಆದರೆ ಕತ್ತಲಲ್ಲಿ ಅವರು ಅವನ ಕೈಗೆ ಸಿಕ್ಕಲಿಲ್ಲ. ಅವರು ಇಲಿನಳನ್ನು ಜಗ್ಗಿಕೊಂಡು ಭರದಿಂದ ಬಾಗಿಲ ಕಡೆ ಸಾಗಿದರು.

ಸಿಜಾರೆಯೂ ಮುಂದಕ್ಕೆ ಧುಮ್ಮಿಕ್ಕಿದ. ಆದರೆ ಅಂಧಕಾರದಲ್ಲಿ ಮೇಜನ್ನೆಡವಿ, ಮೇಜು ಸಹಿತವಾಗಿ ಉರುಳಿಬಿದ್ದುಬಿಟ್ಟ. ಮೇಜು ಎದೆಯ ಮೇಲೆ ಬಿದ್ದುದರಿಂದ ಅವನು ಸಿಟ್ಟು ನೋವುಗಳಿಂದ ವಿಕೃತ ಸ್ವರದಲ್ಲಿ ಕೂಗಿದ. ಬೇರೆ ಬಾಗಿಲಿಂದ ಬಂದಿದ್ದ ಸಿಜಾರೆಯ ಅನುಚರರಿಬ್ಬರೂ ಬ್ಲೇಕರನ್ನು ಹಿಡಿಯುವುದಕ್ಕಾಗಿ ಎರಡೂ ಕೈಗಳನ್ನು ಚಾಚಿಕೊಂಡು ಕತ್ತಲು ಕೋಣೆಯಲ್ಲಿ ತಿರುಗುತ್ತಿದ್ದರು. ಕೊನೆಗೆ ಅವರು ಪರಸ್ಪರರನ್ನು ತಕ್ಕೆಯಲ್ಲಿ ಹಿಡಿದು ಗುದ್ದಾಡತೊಡಗಿದರು. ಬ್ಲೇಕರನ್ನೇ ಹಿಡಿದಿದ್ದೇನೆಂದು ಇಬ್ಬರೂ ತಿಳಿದುಕೊಂಡಿದ್ದರು.

ಬ್ಲೇಕ್ ಇಲಿನಳೊಂದಿಗೆ ಅಲ್ಲಿಂದ ಪಕ್ಕದ ಕೋಣೆಗೆ ಹೋಗುತ್ತಲೂ ಯಾರೋ ಅಂದರು. "ಎಡಗಡೆ ಮಿಸ್ಟರ್! ಅರೆಕ್ಷಣವೂ ತಡಮಾಡಬೇಡಿ!"

ಕಂಠಸ್ವರದಿಂದ ಅವನು ಬಿಲ್ ಮಿಲರ್ ಎಂದು ಬ್ಲೇಕ್ ಅರಿತರು. ಅವನು ಎಲ್ಲಿದ್ದ, ಎಲ್ಲಿಂದ ಹೇಗೆ ಬಂದ ಎಂಬುದೇನೂ ತಿಳಿಯದು. ಅವನು ಬ್ಲೇಕರ ಕೈಹಿಡಿದುಕೊಂಡು ಎಡಗಡೆಗಿದ್ದ ಬಾಗಿಲನ್ನು ತೆರೆದು ಒಳಗೆಳೆದುಕೊಂಡು ನಡೆದ. ಒಳಗೆ ಹೋದೊಡನೆ ಮಿಲರ್ ಬಾಗಿಲಿಕ್ಕಿ ಭದ್ರಪಡಿಸಿದ. ಅಷ್ಟರಲ್ಲಿಯೇ ಸಿಜಾರೆ ಹೊರಗಿನಿಂದ ಬಾಗಿಲನ್ನು ಸರ್ವಶಕ್ತಿಯಿಂದ ತಳ್ಳತೊಡಗಿದ.

ಮಿಲರ್ ದೀಪ ಹಚ್ಚಿ ಬೆಳಕು ಮಾಡಿದ. ಅದೊಂದು ಗುದಾಮು ನಾನಾ ಬಗೆಯ ಸೀಸೆ, ಡಬ್ಬಿ, ಪೆಟ್ಟಿಗೆಗಳು ತುಂಬಿದ್ದವು ಬೆಳಕಿಗಾಗಿ ಮೇಲೆ ಒಂದೇ ಒಂದು ಸ್ಕ್ಯಾಯ್‌ಲೈಟಿತ್ತು.

"ಬೇಗ ಬನ್ನಿ, ಇನ್ನೂ ಪಲಾಯನದ ಆಶೆಯಿದೆ." ಎಂದು ನುಡಿದು ಮಿಲರ್ ಬರೀ ಪೆಟ್ಟಿಗೆಗಳನ್ನು ಒಂದರ ಮೇಲೊಂದಿಟ್ಟು ಚಪ್ಪರದ ವರೆಗೆ ಸೋಪಾನ ರಚಿಸಿದ. ಅಷ್ಟರಲ್ಲಿ ಬಾಗಿಲನ್ನು ಭೇದಿಸಿಕೊಂಡು ಪಿಸ್ತೂ

ಲಿನ ಗುಂಡು ಒಳನುಗ್ಗಿತು. ಅದು ಯಾರಿಗೂ ತಾಕಲಿಲ್ಲ. ಬಾಟ್ಲಿಗೆ ಬಡಿದು ಅದು ಒಡೆದು ಮದ್ಯ ಸೋರಿಯಾಯಿತು.

ಎರಡು ಮೂರು ಸಲ ಹೀಗೆ ಗುಂಡುಹಾರಿಸಿ ಅದು ವ್ಯರ್ಥವೆಂದು ಬಗೆದು ಅದರಿಂದ ನಿವೃತ್ತನಾದ. ಆಮೇಲೆ ಉತ್ತೇಜಿತ ಸ್ವರದಲ್ಲಿ 'ಸರಿಯಿರಿ ನೀವೆಲ್ಲಾ' ಎಂದು ಅನುಚರರನ್ನು ಸರಿಸಿ, ಬಾಗಿಲಿಗೆ ಬೆನ್ನು ಕೊಟ್ಟು ಬಲ ವಾಗಿ ತಳ್ಳಲಾರಂಭಿಸಿದ. ಧಡಧಡನೆಂದು ಬಾಗಿಲ ಸಪ್ಪಳವಾಗತೊಡಗಿತು. ತುಸು ಹೊತ್ತಿನಲ್ಲಿಯೇ ಬಾಗಿಲು ಮುರಿದು ಬೀಳುವುವೆಂಬಲ್ಲಿ ಯಾರಿಗೂ ಸಂದೇಹವುಳಿಯಲಿಲ್ಲ.

ಮಿಲರ್ ಮೇಲಿನ ಪೆಟ್ಟಿಗೆಯ ಮೇಲೇರಿ ನಿಂತು ಪಿಸ್ತೂಲಿನ ನಳಿಕೆ ಯಿಂದ ಸ್ಕೈಲೈಟಿನ ಕಾಜನ್ನು ಸರಿಸಿದ. ಬ್ಲೇಕ್ ಇಲಿನಳನ್ನು ತಮ್ಮ ಹೆಗಲ ಮೇಲೆ ನಿಲ್ಲಿಸಿಕೊಂಡು ನಿಂತಿದ್ದರು. ಮಿಲರ್ ಅವಳನ್ನು ಎತ್ತಿ ಸ್ಕೈಲೈಟಿನ ಕಿಂಡಿಯಿಂದ ಚಪ್ಪರದ ಮೇಲೆ ಸಾಗಿಸಿ, ತಾನೂ ಮೇಲೆ ಹೋದ; ತತ್ ಕ್ಷಣವೇ ಬ್ಲೇಕರೂ ಅವನನ್ನು ಅನುಸರಿಸಿದರು.

ಬ್ಲೇಕ್ ಗುದಾಮಿನಲ್ಲಿಯೇ ಹೊಕ್ಕಿದ್ದಾರೆಂದೂ ಇಲ್ಲಿಂದ ಓಡಿ ಹೋಗಲು ಮಾರ್ಗವಿಲ್ಲವೆಂದೂ ಸಿಜಾರೆ ನಂಬಿದ್ದ. ಒಳಗೆ ಹೊಕ್ಕು ಅವರನ್ನು ಹಿಡಿಯಲೆಂದು ಬಾಗಿಲನ್ನು ಮುರಿಯಲು ಭಗೀರಥ ಪ್ರಯತ್ನ ನಡೆಸಿದ್ದ. ಆ ಪ್ರಯತ್ನ ಸಫಲವೂ ಆಯಿತು. ಕೋಣೆಯ ಬಾಗಿಲು ಮುರಿದು ಬಿತ್ತು. ಕೂಡಲೆ ಅವನು "ಇನ್ನೆಲ್ಲಿ ಹೋಗುವಿರಿ, ನನ್ನ ಕೈಗೆ ಸಿಕ್ಕುಬಿದ್ದಿರಿ" ಎಂದು ಆನಂದದಿಂದ ಕೂಗಿದ.

ಆಗ ಬ್ಲೇಕ್ ಇನ್ನೂ ಪೂರಾ ಮೇಲೆ ಹೋಗಿರಲಿಲ್ಲ. ಅವರ ಒಂದು ಕಾಲು ಇನ್ನೂ ಪೆಟ್ಟಿಗೆಯನ್ನು ಬಿಡುವುದರಲ್ಲಿತ್ತು. ಅವರು ಆ ಪೆಟ್ಟಿಗೆಯ ಸೋಪಾನವನ್ನು ಕೆಡವಿ ಕಾಲು ತಕ್ಕೊಳ್ಳುವುದರೊಳಗಾಗಿಯೇ ಸಿಜಾರೆ ಬಂದು ಎಡಗೈಯಿಂದ ಅವರ ಕಾಲನ್ನು ಹಿಡಿದೆಳೆಯತೊಡಗಿದ; ಅವನ ಬಲ ಗೈಯಲ್ಲಿ ಪಿಸ್ತೂಲು. ಆದರೆ ಬ್ಲೇಕ್ ಚಪ್ಪರವನ್ನು ಗಟ್ಟಿಯಾಗಿ ಹಿಡಿದು ಕೊಂಡು, ಕಾಲನ್ನು ಬಲವಾಗಿ ಜಾಡಿಸಿ ಸಿಜಾರೆಯ ಮೋರೆಗೆ ಒದ್ದರು. ಬಿರುಸು ಬೂಟಿನ ಪ್ರಚಂಡ ಆಘಾತದಿಂದ ಅವನ ತುಟಿಗಳೊಡೆದವು; ದಂತ ಪಙ್ಕ್ತಿಗಳು ಲಿಕಿಲಿಕಿಯಾದವು. ಅವನು ಪಿಸ್ತೂಲನ್ನು ಕೆಳಗೆಸೆದು ಕ್ಷಣ

ಹೊತ್ತು ಎರಡೂ ಕೈಗಳಿಂದ ಮುಖ ಮುಚ್ಚಿಕೊಂಡು ಕುಳಿತ.

ಬ್ಲೇಕರೂ ಮೇಲೆ ಬರಲು ಮೂವರೂ ಲಗುಬಗೆಯಿಂದ ಸಾಗಿದರು. ಚಪ್ಪರದಂಚಿನಿಂದ ನೆಲದ ವರೆಗೂ ಒಂದು ಪೈಪಿತ್ತು. ಮಿಲರ್ ಇಲಿನಳ ಸೊಂಟಕ್ಕೆ ಹಗ್ಗವನ್ನು ಕಟ್ಟಿ ಆ ಕೊಳವೆಗುಂಟ ಅವಳನ್ನು ಕೆಳಗಿಳಿಸಿದ. ಆಮೇಲೆ ಬ್ಲೇಕ್ ಮಿಲರ್ ಇಬ್ಬರೂ ಇಳಿದು ಬಂದರು. ಸಿಜಾರೆಯ ಅನು ಚರರು ಚಪ್ಪರವನ್ನೇರಿ ಬಂದು ನೋಡುವಷ್ಟರಲ್ಲಿ ಅವರು ಕತ್ತಲೆಯ ಓಣಿ ಯಲ್ಲಿ ದೂರ ಕಣ್ಮರೆಯಾಗಿದ್ದರು.

ಮೂವರೂ ಸಂದಿಯನ್ನು ಅತಿಕ್ರಮಿಸಿ ಬೀದಿಗೆ ಬಂದು ಬಸ್ಸೆನ್ನುವಷ್ಟ ರಲ್ಲಿ—ಎಲ್ಲಿದ್ದನೋ ಲುಯಿಗಿನಿ—ಓಡಿಬಂದು ಅವರನ್ನು ಅಡ್ಡಗಟ್ಟಿದ. ಎಲ್ಲಕ್ಕೂ ಮುಂದಿದ್ದವರು ಬ್ಲೇಕ್. ಅವರು ನಿಂತಲ್ಲಿಯೇ ಮುನಿಸಿಪಾಲಿಟಿಯ ಕಸದ ಕುಂಡೆಯಿತ್ತು. ಲುಯಿಗಿನಿಗೆ ಜೇಬಿನಲ್ಲಿಯ ಪಿಸ್ತೂಲನ್ನು ತೆಗೆಯಲು ಅವಕಾಶ ಕೊಡದೆ ಅವರು ಕುಂಡೆಯನ್ನೆತ್ತಿ ಕಸವನ್ನು ಅವನ ಮುಖದ ಮೇಲೆ ಸುರುವಿ ದರು. ಪಾಪ, ಲುಯಿಗಿನಿ ಎರಡೂ ಕೈಗಳಿಂದ ಕಣ್ಣುಜ್ಜಿಕೊಳ್ಳುತ್ತ ನಿಂತಿರು ವಾಗ ಅಲ್ಲಿಂದ ಕಾಲ್ತೆಗೆದರು.

ಸ್ವಲ್ಪ ದೂರದಲ್ಲಿಯೇ ಟ್ಯಾಕ್ಸಿಗಳ ಸ್ಟ್ಯಾಂಡಿತ್ತು. ಒಂದು ಟ್ಯಾಕ್ಸಿ ಬಾಡಿಗೆ ಮುಗಿಸಿಕೊಂಡು ಆದೇ ತಿರುಗಿ ಬಂದಿತ್ತು. ಅದರ ಇಂಜಿನ್ನು ಇನ್ನೂ ಘೊಸ ಘೊಸ ಎನ್ನುತ್ತಿತ್ತು. ಇಲಿನಳನ್ನು ಅದರಲ್ಲಿ ಹತ್ತಿಸಿ ಬ್ಲೇಕ್ ತಾವೂ ಹತ್ತಿದರು. ಮಿಲರ್ ಚಾಲಕನ ಪಕ್ಕದ ಆಸನದಲ್ಲಿ ಕುಳಿತ. ಲುಯಿಗಿನಿ ಮತ್ತು ಮೂರು ನಾಲ್ಕು ಜನ ದಸ್ಯುಗಳು ಧಾವಿಸಿ ಸ್ಟ್ಯಾಂಡಿಗೆ ಬರುವುದ ರೊಳಗಾಗಿಯೇ ಟ್ಯಾಕ್ಸಿ ಟಟಮ್‌ಹ್ಯಾಮ್ ಕೋರ್ಟ್ ರೋಡಿನ ಕಡೆಗೆ ವೇಗವಾಗಿ ಧಾವಿಸಿ ಕಣ್ಮರೆಯಾಯಿತು.

ಟ್ಯಾಕ್ಸಿ ನಿರಾಪದವಾಗಿ ಟಟಮ್‌ಹ್ಯಾಮ್ ಕೋರ್ಟ್ ರೋಡಿಗೆ ಬಂದು ನಿಂತಿತು. "ಜಾಕೀಟನ್ನು ಅಲ್ಲಿಯೇ ಬಿಟ್ಟುಬಂದುಬಿಟ್ಟೆ; ಅದಕ್ಕಾಗಿ ವ್ಯಸನವಾಗುತ್ತದೆ. ಅದನ್ನು ತರುವುದಕ್ಕಾಗಿಯೇ ಅಲ್ಲಿಗೆ ಹೋದದ್ದು." ಮಿಲರನನ್ನು ಕುರಿತು ಎಂದರು ಬ್ಲೇಕ್.

"ನಿಮ್ಮ ಜಾಕೀಟೇ? ತಕೊಳ್ಳಿರಿ ರಾಯರೇ!" ಎಂದು ಮಿಲರ್ ತನ್ನ ಆಸನದಿಂದ ಜಾಕೀಟನ್ನೆತ್ತಿ ಅವರ ತೊಡೆಯ ಮೇಲೆ ಚೆಲ್ಲಿದ. ಅವನು ಸಿಜಾ

ರೆಯ ಕೋಣೆಯಲ್ಲಿ ಯಾವಾಗ ಬಂದನೋ ಹೇಗೆ ಜಾಕೀಟನ್ನು ತಕ್ಕೊಂಡ ನೋ ತಿಳಿಯದು. ಅವರಿಗೆ ಆಶ್ಚರ್ಯವಾಯಿತು.

"ಧನ್ಯವಾದ. ನಿನ್ನ ಕೈಚಳಕ ಚಮತ್ಕಾರವಾದದ್ದು" ಬ್ಲೇಕ್ ಸಂತುಷ್ಟ ರಾಗಿ ನುಡಿದರು.

"ನನ್ನ ಕಿವಿ ಇದಕ್ಕೂ ಚುರುಕು ಧನಿಯರೇ. ಲುಯಿಗಿನಿ ನಿಮ್ಮನ್ನು ಮೋಸದಿಂದ ಕರೆದೊಯ್ದು ಬಲೆಗೆ ಕೆಡಹುವೆನೆಂದು ಹೇಳಿಕೊಳ್ಳುತ್ತಾ ಇದ್ದಳು; ಮರೆಯಲ್ಲಿ ನಿಂತು ನಾನದನ್ನು ಕೇಳಿದ್ದೆ. ಅವನ ಕೆಲಸದ ಭಾರವನ್ನು ನಾನೇ ವಹಿಸಿಕೊಂಡಿದ್ದೆ–ಹಿಹಿಹಿ!" ಎಂದು ಮಿಲರ್ ಹೊರಟುಹೋದ.

ಮುಂದೆ ಕೆಲ ನಿಮಿಷಗಳಲ್ಲಿ ಇಲಿನಳನ್ನು ಅವಳ ಮನೆಯೆದುರು ಟ್ಯಾಕ್ಸಿಯಿಂದಿಳಿಸಿ ಬ್ಲೇಕ್ ಅವಳ ಕಿವಿಯಲ್ಲಿ ಕೇಳಿದರು: "ಆ ಬಿಲ್ಲೆಯನ್ನು ನೀನು ನನಗೇಕೆ ಕೊಟ್ಟೆ? ಏನುದ್ದೇಶ?"

"ಶೀಘ್ರದಲ್ಲಿಯೇ ಗೊತ್ತಾಗುತ್ತದೆ ಅದು. ಒಂದು ದೊಡ್ಡ ವ್ಯಾಪಾರಕ್ಕೆ ಅದರ ಸಂಬಂಧವಿದೆ. ನಾನು ಹೇಳಲಿಲ್ಲವೇ ನಿಮಗೆ? ಈಗ ಆ ಬಗ್ಗೆ ಸ್ವಲ್ಪ ಪ್ರಮಾಣ ಸಿಕ್ಕಿರಬೇಕೆಂದು ನನ್ನ ಭಾವನೆ. ನಿಮ್ಮನ್ನು ನಾನು ಮೊದಲು ಜಾಗೃತಗೊಳಿಸಿಲ್ಲ ಎಂದು ಅನ್ನುವ ಹಾಗಿಲ್ಲ."

ಇಲಿನ್ ತನ್ನ ಮನೆಯ ಬಾಗಿಲ ಕೀಲಿಯನ್ನು ತೆರೆಯತೊಡಗಿದಳು.

"ನಾನೂ ನಿನಗೆ ಜಾಗರೂಕಳಾಗಿರಲು ಹೇಳಿದ್ದೆ. ಮತ್ತೆ ವಿಪತ್ತಿಗೆ ಗುರಿಯಾಗಬಾರದೆಂದು ಇಚ್ಛಿಸುತ್ತಿದ್ದರೆ, ಬೇಗನೆ ಈ ಮನೆಯನ್ನು ಬಿಟ್ಟು ಬೇರೆ ಓಣಿಯಲ್ಲಿ ಮನೆಮಾಡಿರಿ; ಮತ್ತು ನಾಲ್ಕೂ ಕಡೆ ಕಣ್ಣಿಟ್ಟುಕೊಂಡು ಅಡ್ಡಾಡಬೇಕು. ಸಿಜಾರೆಯ ಪ್ರಯತ್ನ ಈಸಲ ನಿಷ್ಫಲವಾಗಿದೆ; ನನ್ನ ಒದೆತ ದಿಂದ ಅವನ ಹಲ್ಲು ಮುರಿದಿವೆ; ಈ ಅಪಮಾನವನ್ನು ಅವನು ಸಹಜವಾಗಿ ಮರೆಯುವುದಿಲ್ಲ." ಎಂದು ಬ್ಲೇಕ್ ಸೂಚಿಸಿದರು.

೬

ಮರುದಿನ ಸಕಾಲದಲ್ಲಿ ಇಲಿನ್ ಬೌಸ್ಫೀಟ್ ಪೋಲೀಸ್ ನ್ಯಾಯಾ ಲಯಕ್ಕೆ ಹಾಜರಾದಳು. ಬ್ಲೇಕರು ಆಕೆಯ ವಚನದಲ್ಲಿ ಭರವಸೆಯಿಡದೆ ಅವಳನ್ನು ನೋಡಲು ಹೊರಟರು. ಅವಳು ನ್ಯಾಯಾಲಯದಲ್ಲಿ ಒಬ್ಬ

ದೀರ್ಘಾಕೃತಿಯ ಸೌಮ್ಯ ಮೂರ್ತಿಯಾದ ಯುವಕನೊಡನೆ ಮಾತನಾಡು ತ್ತಿದ್ದಳು. ಆ ಯುವಕನೇ ಅವಳ ಗಂಡ. ಹೆಲ್ ಹುಟ್ಟಿದ್ದು ಸತ್ಕುಲದಲ್ಲಿಯೇ; ಆದರೆ ಶೈಶವದಲ್ಲಿ ಮತ್ತು ಕಿಶೋರ ವಯಸ್ಸಿನಲ್ಲಿ ಕೆಟ್ಟ ಸಂಗತಿಯ ಫಲವಾಗಿ ಅವನ ಅಧಃಪತನವಾಗಿತ್ತು; ಕೊನೆಗವನು ತಸ್ಕರವೃತ್ತಿಯನ್ನವಲಂಬಿಸಿದ್ದನು. ಈ ವಿಷಯದಲ್ಲಿ ಇಲಿನ್ ಸತ್ಯವಾಗಿಯೂ ಅವನ ಸಹಧರ್ಮಿಣಿ. ಆದರೆ ಸಜ್ಜನ ಸಮಾಜದಲ್ಲಿ ಬೆಲೆಯುಳ್ಳ ಒಂದು ಗುಣ ಅವರಲ್ಲಿ ಅಸಾಧಾರಣವಾಗಿ ದ್ದಿತು. ಮನೋಭಾವವನ್ನು ಬಚ್ಚಿಡುವುದರಲ್ಲಿಯೂ ಅವರಿಬ್ಬರೂ ನಿಃಸೀ ಮರು. ಅವರ ನ್ಯೂನತೆಯನ್ನು ಕಂಡುಹಿಡಿಯುವುದು ಯಾರಿಗೂ ಸಾಧ್ಯ ವಿರಲಿಲ್ಲ.

ಕೋರ್ಟು ಆರಂಭವಾದೊಡನೆ ಇಲಿನಳಿಗೇ ಮೊದಲ ಕರೆ ಬಂದಿತು. ಅವಳು ಅಪರಾಧವನ್ನು ನಿರಾಕರಿಸಲಿಲ್ಲ; ನಿರಾಕರಿಸುವುದರಿಂದ ಲಾಭವಿಲ್ಲ ವೆಂದು ಅವಳಿಗೆ ಗೊತ್ತಿತ್ತು. ಕುಡಿದ ಮತ್ತಿನಲ್ಲಾದ ಅಪರಾಧಕ್ಕೆ ಕಠಿನ ಶಿಕ್ಷೆ ಯಾಗುವುದಿಲ್ಲ. ಕಿಂಚಿತ್ ದಂಡ ತೆತ್ತು ಅವಳು ಬಿಡುಗಡೆ ಹೊಂದಿದಳು.

ಆರೋಪಿಯ ಪಂಜರದಿಂದ ಇಲಿನ್ ಇಳಿದು ಈಚೆಗೆ ಬರುತ್ತಲೇ ಬ್ಲೇಕ್, ''ನಿಮ್ಮ ಮೊದಲಿನ ಮನೆ ಬಿಟ್ಟಿರಾ?'' ಎಂದೇ ಮೊದಲನೆಯ ಪ್ರಶ್ನೆ ಕೇಳಿದರು.

''ಇಲ್ಲ, ಇನ್ನೂ ಬಿಡುವುದಾಗಿಲ್ಲ.'' ಇಲಿನ್ ಹೇಳಿದಳು.

''ಆದರೆ ನಿನ್ನೆ ನಾನು ಎಚ್ಚರಿಸಿದ್ದೆ.''

''ಅದಕ್ಕಾಗಿ ನಿಮಗೆ ಧನ್ಯವಾದಗಳು. ನಿಮ್ಮ ಅನುಗ್ರಹವನ್ನು ನಾನು ಮರೆಯಲಾರೆ. ಆದರೆ ಒಂದು ವಿಷಯ ನೀವು ಯೋಚನೆ ಮಾಡಿದ್ದೀರಾ? ನಾನು ಒಂದು ವೇಳೆ ಈ ಮನೆ ಬಿಟ್ಟು ಎರಡನೆಯ ಮನೆಗೆ ಹೋದರೂ ಗಾಳಿಯೊಳಗೆ ಗಾಳಿಯಾಗಿ ಅಡ್ಡಾಡುವುದು ಸಾಧ್ಯವೆ? ನಾನು ಆ ಕಡೆಯಿಂದ ಕೋರ್ಟಿಗೆ ಬಂದಿದ್ದರೆ, ಅವರು ಪ್ರಯತ್ನಿಸಿದ್ದರೆ ನನ್ನನ್ನು ನೋಡದೆ ಇರು ತ್ತಿದ್ದರೆ? ನಾನು ಎಲ್ಲಿ ಮನೆಮಾಡಿದರೂ ಅವರು ನನ್ನನ್ನು ನೋಡಿಯೇ ನೋಡುವರು, ಅನುಸರಿಸಿಯೇ ಅನುಸರಿಸುವರು. ಈಗಲಾದರೂ ಅವರು ನನ್ನ ಬೆನ್ನು ಬಿಟ್ಟಿದ್ದಾರೆಂದು ಪಣಕಟ್ಟಿ ಹೇಳಬಲ್ಲಿರಾ ನೀವು?'' ಎಂದು ಇಲಿ

ನಳು ಪ್ರತಿ ಪ್ರಶ್ನೆ ಒಡ್ಡಿದಳು.

"ಮಿ. ಬ್ಲೇಕ್," ಇಲಿನಳ ಗಂಡ ಜಿಲ್ಬರ್ಟ್ ಹಲ್ಲನು ಕಚ್ಚಿ ನುಡಿದ: "ಮಿ ಬ್ಲೇಕ್, ದುಷ್ಟರ ದವಡೆಯಿಂದ ಹೆಂಡತಿಯನ್ನು ರಕ್ಷಿಸಿಕೊಳ್ಳುವಷ್ಟು ಶಕ್ತಿಯೂ ನನ್ನಲಿಲ್ಲವೆಂದು ಭಾವಿಸಿದ್ದೀರೇನು ನೀವು? ಹಾಗಿದ್ದರೆ ನೀವಿನ್ನೂ ನನ್ನನ್ನು ಸರಿಯಾಗಿ ಅರಿತಿಲ್ಲವೆಂದೇ ಹೇಳಬೇಕು."

"ಅಪ್ಪನಿಗೂ ಅಪ್ಪ ಇರುತ್ತಾನೆ. ಅವರು ನಿಮ್ಮನ್ನು ಹಿಡಿದು ಸೆರೆ ಯಲ್ಲಿಡಬಹುದು. ನನಗೆನಿಸುತ್ತದೆ, ನೀವು ಕೆಲಕಾಲ ಪ್ಯಾರಿಸಿಗಾಗಲಿ ಬೇರೆಲ್ಲಿ ಯಾಗಲಿ ಹೋಗಿಬೇಕು, ಅಂದರೆ ನಿಷ್ಕಂಟಕರಾಗುವಿರಿ." ಬ್ಲೇಕ್ ಹೇಳಿದರು.

"ಈ ಸೂಚನೆಗಾಗಿ ಅನಂತ ಧನ್ಯವಾದ ನಿಮಗೆ ಮಿ ಬ್ಲೇಕ್. ಈ ಬಗ್ಗೆ ನಾನು ವಿಚಾರಮಾಡಿ ನೋಡುತ್ತೇನೆ. ಅಲ್ಲಿಗೆ ಹೋಗಲೂ ಬಹುದು. ನಿನ್ನೆ ರಾತ್ರಿ ನೀವು ನನ್ನ ಹೆಂಡತಿಗೆ ಮಾಡಿದ ಉಪಕಾರಕ್ಕಾಗಿ ನಾನು ಚಿರಋಣಿ. —ನಡೆ ಹುಡಿಗಿ, ಇನ್ನು ಹೋಗುವುದೇ ಒಳ್ಳೇದು." ಎಂದು ಹೆಲ್ ನುಡಿದ. ಬಳಿಕ ಗಂಡ–ಹೆಂಡಿರಿಬ್ಬರೂ ಒಂದು ಚಿಕ್ಕ ಕಾರಿನಲ್ಲಿ ಕುಳಿತು ಹೊರಟು ಹೋದರು ಬ್ಲೇಕ್ ನಡೆದುಕೊಂಡೇ ಹೊರಟರು.

ಅವರು ಕೋರ್ಟಿನಿಂದ ಸ್ವಲ್ಪ ದೂರ ಬಂದಿದ್ದರು. ಆಗವರಿಗೆ ತಮ್ಮನ್ನು ಯಾರೋ ಅನುಸರಿಸಿ ಬರುತ್ತಿರುವಂತೆ ಭಾಸವಾಯಿತು. ಆದರವರು ಹಿಂತಿ ರುಗಿ ನೋಡಲಿಲ್ಲ. ಮುಂದುವರಿಯುತ್ತಲೇ ಹಲಕೆಲವು ಅಂಗಡಿಗಳ ಕಿಡಿಕಿ ಗಳ ಕಾಜಿನಲ್ಲಿ ತಮ್ಮ ಹಿಂದೆ ಬರುತ್ತಿದ್ದವರ ಪ್ರತಿಬಿಂಬಗಳನ್ನು ನೋಡಿದರು. ಅವರು ಇಬ್ಬರಿದ್ದರು. ಅವರ ಉಗ್ರಮುಖಗಳನ್ನೂ ವೇಷಗಳನ್ನೂ ನೋಡಿದರೆ ಪುಂಡರಂತೆ ಕಾಣುತ್ತಿದ್ದರು. ಬ್ಲೇಕ್ ಒಂದೇ ದಾರಿಯಲ್ಲಿ ಎರಡು ಸಾರಿ ತಿರುಗಿ, ಕೊನೆಗೆ ಬೇರೊಂದು ಬೀದಿಯನ್ನು ಪ್ರವೇಶಿಸಿದರು. ಆದರೂ ಆ ಪುಂಡರು ಅವರ ಬೆನ್ನು ಬಿಡಲಿಲ್ಲ.

'ಇಲಿನ್ ಹೇಳಿದ್ದು ಸರಿಯೇ' ಎಂದು ಅವರ ಮನಸಿಗಾಯಿತು. ಸಂಗಡ ಪಿಸ್ತೂಲನ್ನು ತಂದಿರಲಿಲ್ಲವಾದುದರಿಂದ ಅವರು ಸ್ವಲ್ಪ ಚಿಂತಿಸ ಬೇಕಾಗಿತ್ತು. ಪಕ್ಕನೆ ಆಕ್ರಮಣವಾದರೆ ಆತ್ಮರಕ್ಷಣೆಯ ಬಗೆ ಹೇಗೆ? ಆಗ ಸುಮಾರು ನಡುಹಗಲು; ಬಹುಶಃ ಎಲ್ಲ ಬೀದಿಗಳಲ್ಲಿ ಜನಗದ್ದಲವಿತ್ತು; ಆದರೂ

ಬ್ಲೇಕರ ಮನಸು ನಿಶ್ಚಿಂತವಾಗಲಿಲ್ಲ. ಕಳೆದ ರಾತ್ರಿ ಅವರು ತಸ್ಕರ ಸಾರ್ವಭೌಮನ ಕುಟಿಲ ಯುಕ್ತಿಗಳನ್ನೆಲ್ಲ ವ್ಯರ್ಥಗೊಳಿಸಿ, ಬೂಟುಗಾಲಿನಿಂದ ಅವನ ಮುಖವನ್ನೊಡೆದು, ಇಲಿನಳನ್ನು ಅವನ ಬಂಧನದಿಂದ ಬಿಡಿಸಿಕೊಂಡು ಬಂದಿದ್ದರು; ಈ ಅಪಮಾನವನ್ನು ಅವನು ಮರೆಯುವುದಿಲ್ಲ, ಮರೆಯುವುದು ಸಾಧ್ಯವಿಲ್ಲ; ಅದೆಲ್ಲ ಬ್ಲೇಕರಿಗೆ ಖಂಡಿತ ಗೊತ್ತು. ಆದರೆ ಸಿಜಾರೆ ಎಷ್ಟು ಮಟ್ಟಿಗೆ ಮುಂದುವರಿಯಬಹುದೆಂಬುದು ಅವರ ಅನುಮಾನಕ್ಕೆ ನಿಲುಕದಾಯಿತು.

ಇನ್ನೂ ಸ್ವಲ್ಪ ಮುಂದುವರಿದು ಬ್ಲೇಕ್ ಒಂದು ಸಂದಿಯನ್ನು ಹೊಕ್ಕರು. ಆ ಸಂದಿಯ ಆರಂಭದಲ್ಲಿಯೇ ಎತ್ತರವಾದ ಗೋಡೆಯಿತ್ತು. ಅವರು ಆ ಗೋಡೆಗೆ ಅಂಟಿಕೊಂಡು ಉತ್ಕರ್ಣರಾಗಿ ನಿಂತುಕೊಂಡರು. ಸ್ವಲ್ಪ ಸಮಯದಲ್ಲಿ ಆ ಸಂದಿಯ ತಿರುಹಿನಲ್ಲಿ ಹೆಜ್ಜೆಯ ಸಪ್ಪಳವಾಯಿತು. ಒಬ್ಬ ಮನುಷ್ಯ ಅದೇ ಸಂದಿಯನ್ನು ಹೊಕ್ಕನು; ಅವನು ಪೂರ್ವೋಕ್ತ ಪುಂಡರಲ್ಲಿ ಒಬ್ಬನು. ಅವನು ಸಮೀಪಕ್ಕೆ ಬರುವುದೇ ತಡ, ಬ್ಲೇಕರು ಅವನ ಮೇಲೆ ಹಾರಿದರು; ಅವನ ಕೈಯನ್ನು ಹಿಡಿದೆಳೆದು ಎಲ್ಲ ಕಸುವನ್ನುಪಯೋಗಿಸಿ ಬೆನ್ನಿಗೆ ಗುದ್ದಿದರು. ಪುಂಡನು ಆ ಪೆಟ್ಟನ್ನು ತಾಳಲಾರದೆ ಆರ್ತನಾದ ಮಾಡಿ ನೆಲಕ್ಕೆ ಕುಳಿತನು.

ಬ್ಲೇಕ್ ಅವನ ಕೈಯನ್ನು ಹಿಡಿದು ಕಸುವಿನಿಂದ ಜಗ್ಗಿ, "ಒಂದು ತಾಸಿನಿಂದ ನೋಡುತ್ತೇನೆ–ನಾಯಿಯಂತೆ ಬೆನ್ನುಹತ್ತಿದ್ದೀ. ಏನು ಕಾರಣ ಹೇಳು!" ಎಂದರು.

''ಕಾರಣ? ಕಾರಣಗೀರಣ ಏನೂ ಇಲ್ಲ. ನೀವು ಸುಮ್ಮಸುಮ್ಮನೆ ಗುದ್ದಿ ನನ್ನ ಎಲುವು ಮುರಿದಿರಿ. ನನ್ನ ಕೈಯೆಲುವು ಕೂಡ ಲಿಟಲಿಟಿ ಅಂದು ಹೋದವು. ಕೈಬಿಡಿರಿ, ಬಿಡುವಿರಾ ಸ್ವಾಮಿ?''

ಬ್ಲೇಕ್ ಅವನ ಕೈಬಿಟ್ಟು ಜೇಬಿನೊಳಗಿದ್ದ ಚಿಲುಮೆಯನ್ನು ಎದ್ದು ಕಾಣುವಂತಿಟ್ಟರು–ನೋಡುವವರಿಗೆ ಅದೊಂದು ಚಿಕ್ಕ ಪಿಸ್ತೂಲೆಂದು ಕಾಣುವಂತೆ. ಬಳಿಕ ಆ ಪುಂಡನಿಗೆ ''ನಿಮ್ಮ ಉದ್ದೇಶ ಸರಿಯಾಗಿ ತಿಳಿಯದಿದ್ದರೂ ಹಗಲೂ ರಾತ್ರಿ ನನ್ನ ಹಿಂದೆ ತಿರುಗುವುದು ಅಸಹನೀಯ. ನೀವು ಒಂದಿಬ್ಬರು ಯಾವಾಗಲೂ ನನ್ನ ಬೆನ್ನನ್ನೇ ಬಿಟ್ಟಿಲ್ಲ–ಅದೇಕೆ ಹೇಳು. ಪೋಲಿಸರನ್ನು

ಕರೆದು ನಿಮ್ಮಿಬ್ಬರನ್ನೂ ಹಿಡಿದುಕೊಟ್ಟುಬಿಡುತ್ತೇನೆ. ತಿಳಿಯಿತೇ ನಾನು ಹೇಳುತ್ತಿರುವುದು?'' ಎಂದರು.

ಪುಂಡನು ಮೆತ್ತಗಾದ ದನಿಯಲ್ಲಿ ಉತ್ತರವಿತ್ತ. ''ಇದು ನಿಮ್ಮ ಅನ್ಯಾಯದ ಆತಂಕವಲ್ಲವೇ ರಾಯರೆ? ಸರಕಾರಿ ದಾರಿಯಲ್ಲಿ ಅಡ್ಡಾಡಲು ಎಲ್ಲರಿಗೂ ಇದೆ ಅಧಿಕಾರ. ನಮ್ಮಷ್ಟಕ್ಕೆ ನಾವು ದಾರಿಹಿಡಿದು ಹೋಗುತ್ತಿದ್ದರೆ ನೀವು ಸುಮ್ಮನೆ ನಮ್ಮನ್ನು ಹಿಡಿದು ತೊಂದರೆಪಡಿಸಬೇಕೆ? ನಾವು ನಿಮಗೆ ಮಾಡಿದ ಹಾನಿಯಾದರೂ ಏನು ಹೇಳಿ.''

''ಇಲ್ಲ. ಹಾನಿಮಾಡುವದು ಸಾಧ್ಯವೂ ಇಲ್ಲ. ಅಂಥ ಸುಯೋಗವನ್ನೇ ನಾನು ನಿಮಗೆ ಕೊಡುವುದಿಲ್ಲ. ಅದ್ದರಿಂದ ಸುಮ್ಮನೆ ಯಾಕಪ್ಪ ಕಷ್ಟ ಪಡುತ್ತೀರಿ. ಹೊತ್ತು ಹಾಳು ಮಾಡುತ್ತೀರಿ? ನಾನು ಅಂದವನ್ನೆಲ್ಲಾ—ಅಡ್ಡೆಗೆ ಹೋಗಿ ನಿಮ್ಮ ಸರದಾರನಿಗೆ ಹೇಳಿರಿ. ಹೊತ್ತಿಗೆ ಬೆಲೆಯಿಲ್ಲವೆ? ಹೋಗಿ ನಾಲ್ಕು ದುಡ್ಡು ಸಿಕ್ಕುವಂಥ ಹೋರೆ ಮಾಡಿರಿ.''

ಬ್ಲೇಕ್ ಅವನ ಕೈಬಿಟ್ಟರು ಅವನು ತನ್ನ ನೋವಾದ ಬೆನ್ನೆಲುವನ್ನು ತಿಕ್ಕಿಕೊಳ್ಳುತ್ತ ಎದ್ದು, ಅವರನ್ನು ಬಯ್ಯುತ್ತ ಹೊರಟುಹೋದ. ಅವನ ಜೊತೆಗಾರ ಸ್ವಲ್ಪ ದೂರ ನಿಂತು ಅವನ ಅವಸ್ಥೆಯನ್ನು ನೋಡುತ್ತಿದ್ದ. ಅವರಿಬ್ಬರೂ ಬೇರೆ ಕಡೆ ಹೊರಟು ಹೋದರು—ಬ್ಲೇಕರ ಕಡೆಗೆ ತಿರುಗಿ ನೋಡಲಿಲ್ಲ. ಅವರು ಕ್ಷಣಹೊತ್ತು ಅಲ್ಲಿಯೇ ನಿಂತು ಅವರ ಚಲನವಲನವನ್ನು ನಿರೀಕ್ಷಿಸಿ, ಅವರು ಮರೆಯಾದ ಮೇಲೆ ಮತ್ತೆ ಮುಂದುವರಿದರು.

ಅವರು ಕೆಲವು ಮನೆಗಳನ್ನು ದಾಟಿರಬಹುದು, ಮತ್ತೆ ಯಾರೋ ತಮ್ಮನ್ನು ಅನುಸರಿಸುತ್ತಿರುವರೆಂಬ ಸಂದೇಹ ಅವರಿಗುಂಟಾಯಿತು. ಅವರು ಹೊರಳಿ ನೋಡಿ, ಬೇರಿಬ್ಬರು ಹೊಸಬರು ಇತ್ತ ಕಡೆ ಬರುತ್ತಿರುವುದನ್ನು ಕಂಡರು. ಈ ಸಲವೂ ಅವರು ಬೇಕೆಂತಲೇ ಬೇರೆ ದಾರಿ ಹಿಡಿದರು. ಅವರಿಬ್ಬರೂ ಅದೇ ದಾರಿಯಲ್ಲಿ ಹೊರಳಿ ಬ್ಲೇಕರ ಹಿಂದೆ ಹಿಂದೆ ಬರತೊಡಗಿದರು.

ಈಗ ಅಡ್ಡ ತಿಡ್ಡ ಸಂದಿಗೊಂದಿ ತಿರುಗುತ್ತ ಒಂದು ಸ್ಥಾನಕ್ಕೆ ಬಂದಾಗ, ಅಲ್ಲಿಂದ ಸ್ಕಾರ್ಲೇಟಿಯ ಅಂಗಡಿ ದೂರವಿಲ್ಲವೆಂದು ಬ್ಲೇಕರಿಗೆ ಗೊತ್ತಾಯಿತು. ಆ ಅಂಗಡಿಯಲ್ಲಿಯೇ ಹೊಕ್ಕುಕೊಳ್ಳಬೇಕೆಂದು ಅವರಿಗೆ ಮನಸ್ಸಾಯಿತು.

ಕೆಲ ನಿಮಿಷಗಳಲ್ಲಿ ಕಾಸ್ಮೋಪ್ರೋಲಿಸ್ ಹೋಟೆಲಿನ ಬಿದ್ದ ಆವಾರಗೋಡೆ ಮತ್ತು ಇಟ್ಟಿಗೆ ಕಟ್ಟಿಗೆ ಸಣ್ಣ ಮಣ್ಣುಗಳ ರಾಸಿಗಳ ಬಳಿ ಬಂದರು. ಇದು ಅಡಗಿಕೊಳ್ಳಲು ತಕ್ಕ ಸ್ಥಾನವೆಂಬುದು ಅವರಿಗೆ ನೆನಪಾಯಿತು.

ಹೋಟೆಲಿನ ಮುಂಬಾಗಿಲು ತೆರೆದಿತ್ತು. ಒಡಕ ಇಟ್ಟಿಗೆಗಳನ್ನು ತುಂಬಿ ಕೊಂಡು ಲಾರಿಯೊಂದು ಅಲ್ಲಿಂದ ಹೊರಬಿದ್ದಿತು. ಬ್ಲೇಕ್ ಇದೇ ಹೊತ್ತೆಂದು ಲಾರಿಯ ಪಕ್ಕದಲ್ಲಿ ಹಾಯ್ದು ಹೋಟೆಲಿನ ಅಂಗಳವನ್ನು ಸೇರಿದರು. ಆಗ ಗಾಳಿ ಸ್ವಲ್ಪ ಜೋರಾಗಿ ಬೀಸಿ ದೂಳೆಬ್ಬಿಸಿತು. ಆದ್ದರಿಂದ ಅವರು ಕೊಂಚ ಮೋರೆ ತಿರುಗಿಸಿದರು. ಬಾಗಿಲ ಹತ್ತಿರ ತಮ್ಮನ್ನನುಸರಿಸಿದ್ದ ಇಬ್ಬರು ನಿಂತಿದ್ದುದು ಕಂಡಿತು. ಕಾವಲುಗಾರ ಅವರನ್ನು ತಡೆದಿದ್ದ.

ಬ್ಲೇಕ್ ಅಂಗಳದಲ್ಲಿ ಸ್ವಲ್ಪ ಮುಂದುವರಿಯುತ್ತಲೂ ಕಂತ್ರಾಟಗಾರನ ಗುಮಾಸ್ತನು ಅವರನ್ನು ತಡೆದನು. ಆಗ ಬ್ಲೇಕ್ ತಮ್ಮ ಹೆಸರಿನ ಕಾರ್ಡನ್ನು ಅವನಿಗೆ ತೋರಿಸಿದರು. ಅವರ ಹೆಸರನ್ನು ಅವನು ಬಲ್ಲ. ಹೋಟೆಲಿನ ಹಾಳುಗೋಡೆಯ ಮರೆಮರೆಗೆ ಅವರು ತಿರುಗುತ್ತಿರುವುದನ್ನು ಕಂಡು ಅವನಿಗೆ ವಿಸ್ಮಯವಾಯಿತು. ಆದರೆ ಅವರ ಕೈಫಿಯತ್ತನ್ನು ಕೇಳಿದಾಗ ಗುಮಾಸ್ತನು ಅವರನ್ನು ನಿರೋಧಿಸುವ ಸಾಹಸ ಮಾಡಲಿಲ್ಲ. ಅಭಿವಾದನೆಯ ಭಂಗಿಯಲ್ಲಿ ಟೊಪ್ಪಿಗೆಯನ್ನು ಸ್ಪರ್ಶಿಸಿಕೊಂಡು ಮೃದು ಸ್ವರದಲ್ಲಿ ಅವನು ಮಾತನಾಡಿದ:

"ಆ ಇಬ್ಬರು ಮನುಷ್ಯರ ಕಣ್ಣುತಪ್ಪಿಸಲು ಇಷ್ಟಪಡುವಿರಾ? ಅದೇನು ಅಷ್ಟು ಕಠಿನ? ನೀವು ಈ ಸುಯೋಗದಲ್ಲಿ ಹೋಟೆಲನ್ನು ಸುತ್ತಾಡಿಕೊಂಡು ಬರಬಹುದು. ಹೋಟೆಲಿನ ಕೆಲ ಕೆಲವು ಭಾಗಗಳನ್ನು ಕೆಡವಿಬಿಟ್ಟಿದ್ದೇವೆ; ಅವನ್ನು ಹೊಸದಾಗಿ ಕಟ್ಟಬೇಕಾಗಿದೆ; ಈಗ ಕಾಣುವ ಸ್ಥಿತಿ ಇನ್ನೊಂದು ವಾರದ ಮೇಲೆ ಕಾಣಲಾರದು."

"ಆಗಲಿ" ಎಂದು ಬ್ಲೇಕ್ ಗುಮಾಸ್ತನನ್ನು ಹಿಂಬಾಲಿಸಿದರು. ಆ ವಿಶಾಲವಾದ ಕಟ್ಟಡದ ಅನೇಕ ಕೋಣೆಗಳನ್ನು ಸಾಮಾನು ತೆಗೆದು ತೆರವು ಮಾಡಿದ್ದರು. ಒಂದು ಕಡೆಯ ವರಾಂಡಾ ಮತ್ತು ಅದರ ಮೇಲಿನ ಚಪ್ಪರದ ಕೆಲವಂಶವನ್ನು ಕೆಡವಿದ್ದರು. ಕಟ್ಟಡದ ಮುಖ್ಯಭಾಗ ಮಾತ್ರ ಇನ್ನೂ ಹಾಗೆಯೇ ಇತ್ತು. ಸುತ್ತುಕಡೆ ಮಿಸ್ತ್ರಿಗಳ ಸಾಮಾನುಗಳೂ ದೊಡ್ಡ ದೊಡ್ಡ ಏಣಿಗಳೂ ಇಟ್ಟಿದ್ದವು.

ಆ ಕಟ್ಟಡದ ಮೇಲಟ್ಟದಿಂದ, ಅಗಣಿತ ಸೌಧ ಕಿರೀಟ ಧಾರಿಣಿಯಾದ ಲಂಡನ್ ರಾಜಧಾನಿಯ ಭವ್ಯ ಮಂದಿರ ಶ್ರೇಣಿಗಳು, ಶ್ಯಾಮಲ ತರುಗುಲ್ಮ ಸಂಕೀರ್ಣವಾದ ಸುಂದರ ಉಪವನಗಳು, ಸುವಿಸ್ತೀರ್ಣವಾದ ಹಸಿರು ಹಾಸಿನಂತೆ ಕಂಗೊಳಿಸುವ ಹುಲ್ಲುಬಯಲು, ಅಸಂಖ್ಯ ವಾಹನ–ಜನಸಮೂಹಗಳಿಂದ ಗಜಬಜಿಸಿದ ಬಹುದೂರದ ವರೆಗೆ ಚಾಚಿಕೊಂಡಿರುವ ಪ್ರಶಸ್ತವಾದ ಬೀದಿಗಳು ದೃಷ್ಟಿಗೋಚರವಾಗುತ್ತಿದ್ದವು.

"ಈ ಕಟ್ಟಡದ ಮೇಲ್ಮಾಳಿಗೆಯಿಂದ ನಾಲ್ಕೂ ಸಿಟ್ಟಿನ ದೃಶ್ಯಗಳು ಬಹುದೂರದ ವರೆಗೆ ಕಾಣುವ ಹಾಗೆ ಸೇಂಟ್‌ಪಾಲರ ಪ್ರಾರ್ಥನಾಲಯದ ಹೊರತು ಬೇರೆ ಎಲ್ಲಿಂದಲೂ ಕಾಣಿಸುವುದಿಲ್ಲ. ಇಂಥ ಸುಯೋಗವನ್ನು ನೀವು ಕಳೆದುಕೊಳ್ಳಬೇಡಿ. ಬನ್ನಿ, ತೋರಿಸುತ್ತೇನೆ."

"ಒಳ್ಳೇದು" ಎಂದು ಬ್ಲೇಕ್ ಗುಮಾಸ್ತನನ್ನು ಅನುಸರಿಸಿದರು. ಇಬ್ಬರೂ ಪ್ರಶಸ್ತವಾದ ಸೋಪಾನವನ್ನೇರಿ ಹೋದರು. ಕಟ್ಟಡದ ತುಟ್ಟ ತುದಿಯ ವರೆಗೂ ಹೋಗಿ ಬ್ಲೇಕ್ ನಾಲ್ಕೂ ಕಡೆ ನೋಡಿದರು. ಮಧ್ಯಾಹ್ನ ಭಾಸ್ಕರನ ಪ್ರದೀಪ್ತ ಕಿರಣಗಳಿಂದ ಉದ್ಭಾಸಿತವಾದ ಮಹಾನಗರಿಯ ವೈಚಿತ್ರ್ಯಪೂರ್ಣ ದೃಶ್ಯವನ್ನು ಕಂಡು ಅವರ ಮನಸು ತಣಿಯಿತು. ಮೇಲೆ ಖರ–ರವಿಕರ–ಸಮುಜ್ವಲವಾದ, ಜಲದ-ಜಾಲ-ವರ್ಜಿತವಾದ ಸ್ವಚ್ಛ ನೀಲಾಕಾಶ; ಕೆಳಗೆ ಮಾನವನ ಯುಗಯುಗಗಳ ಪ್ರಯತ್ನ ಪರಿಶ್ರಮಗಳ ಫಲವಾದ ಶಿಲ್ಪಚಾತುರ್ಯ! ಬ್ಲೇಕ್ ಮುಗ್ಧನೇತ್ರಗಳಿಂದ ನೋಡುತ್ತ ಸ್ಥಲ–ಕಾಲಗಳನ್ನೂ ತಮ್ಮನ್ನೂ ಮರೆತುಬಿಟ್ಟರು.

ಕೊನೆ ಮಹಡಿಯಿಂದ ಬಹಳ ಕೆಳಗಡೆ ಕಟ್ಟಡದ ಪಾದದೇಶದಲ್ಲಿ ಸ್ಕಾರ್ಲೆಟಿಯ ಸಲೂನು, ನಿನ್ನೆ ರಾತ್ರಿ ನೋಡಿದ ಅದರ ಕಿಡಿಕಿ ಕೂಡ, ಕಾಣಿಸಿತು. ಬ್ಲೇಕ್ ನಿಟ್ಟುಸಿರ್ಗರೆದು ಗುಮಾಸ್ತನಿಗೆ, "ನಡೆಯಿರಿ, ನಾವಿನ್ನು ಕೆಳಗೆ ಹೋಗುವಾ" ಎಂದರು.

"ನಡೆಯಿರಿ. ಈಗ ಬೇರೆ ಕಡೆಯಿಂದ ಕೆಳಗಿಳಿಯುವ."

ಅವರು ಬೇರೆ ಸಾವಟಿಗೆಯಿಂದಿಳಿದು ಒಂದು ದೊಡ್ಡ ಹಾಲಿಗೆ ಬಂದರು. ಅದರ ನೆಲಗಟ್ಟು ಶುಭ್ರ ಅಮೃತಶಿಲೆಯದು. ಆದರೆ ಆ ದೊಡ್ಡ ಹಾಲಿಗೆ ಎಲ್ಲೆಲ್ಲೂ ಒಂದು ಕೂಡ ಕಿಡಿಕಿ ಕಾಣಲಿಲ್ಲ. ಸೂರ್ಯಪ್ರಕಾಶಕ್ಕೂ ಪ್ರವೇಶವಿರ

ಲಿಲ್ಲ. ಬೆಳಕಿಗಾಗಿ ನಡುಹಗಲಲ್ಲಿ ಕೂಡ ಒಂದು ದೀಪ ಹಚ್ಚಿದ್ದರು.

''ಇಂಥ ಚಮತ್ಕಾರವಾದ ಮನೆಯನ್ನು ಕೆಡವಿ ಲಂಡ ಭಂಡ ಮಾಡು ತ್ತಿದ್ದಾರೆ! ಈ ಹಾಲನ್ನೂ ಕೆಡವುತ್ತಾರೆಯೆ?'' ಬ್ಲೇಕ್ ವಿಸ್ಮಯದಿಂದ ಕೇಳಿದರು.

''ಇಲ್ಲ. ಇದನ್ನೀಗ ಕೆಡಹುವುದಿಲ್ಲ. ಇದು ಸ್ವತಂತ್ರ ಹಾಲು, ನೋಡಿ. ಯುಬೆನ್‌ಕೇನ್ ಎಂಬವರು ಇದನ್ನು ಲಿಲಾವಿನಲ್ಲಿ ಕೊಂಡಿದ್ದರು ಸೋಮ ವಾರ ದಿನ ಅವರಿದರ ಅಧಿಕಾರ ಬಿಟ್ಟುಕೊಡುವರು—ಹಾಗೆ ಮಾತಾಗಿದೆ. ಅವರು ಬಿಟ್ಟುಕೊಡದಿದ್ದರೆ ನಮ್ಮ ಕೆಲಸವೇ ಮುಂದುವರಿಯುವಂತಿಲ್ಲ''

"ಸೋಮವಾರ? ಆದರೆ ಇಂದಾಗಲೇ ಶುಕ್ರವಾರ."

''ಹೌದು. ಆದರೆ ಅವರು ಹಾಗೆ ಮಾಡಿಯಾರೆಂದು ಅನಿಸುವುದಿಲ್ಲ. ಅವರನ್ನುತ್ತಿದ್ದರು: ಫ್ರಾನ್ಸಿನಿಂದ ಅಥವಾ ಇಟಲಿಯಿಂದ ನಿಪುಣ ಮಿಸ್ತ್ರಿ ಯನ್ನು ಕರೆಸುತ್ತೇನೆ ಎಂದು. ಅವರ ಈ ಮಾತಿನಿಂದ ಮನಸಿನಲ್ಲಿ ಸ್ವಲ್ಪ ಸಂದೇಹವುಂಟಾಗಿದೆ ಮಿ. ಬ್ಲೇಕ್!'' ಗುಮಾಸ್ತನು ಆ ಕೋಣೆಯ ಒಂದು ಮೂಲೆಯ ಕಡೆಗೆ ಬೆರಳು ಮಾಡಿ ಪ್ಯಾಕಿಂಗ್ ಬಾಕ್ಸುಗಳ ರಾಶಿಯನ್ನು ಬ್ಲೇಕರಿಗೆ ತೋರಿಸಿ ಮಾತು ಮುಂದುವರಿಸಿದ. "ಅವುಗಳನ್ನು ಬಹಳ ಕಡಿಮೆ ಬೆಲೆಗೆ ಅವರು ಕೊಂಡಿದ್ದಾರೆ. ಆದರೆ ಅವರ ವೇಳೆಯೇ ಕೆಟ್ಟ, ಯಾವ ಕಡೆಯಲ್ಲಿಯೂ ಅವರಿಗೆ ಅನುಕೂಲವಿಲ್ಲ ಎಂದೆನಿಸುತ್ತದೆ. ನಮ್ಮ ಯಜ ಮಾನರು ಈ ಎಲ್ಲ ಅಮೃತಶಿಲೆಗಳನ್ನೂ ಕೊಂಡುಬಿಡಬೇಕೆಂದು ಮಾಡಿ ದ್ದರು. ಆದರೆ ಅವನ್ನು ಕೆತ್ತಿ ಬೇರೆ ಕಡೆಗೆ ಸಾಗಿಸಿದರೆ ಅವುಗಳ ಪಾಲೀಸು ಕೆಟ್ಟುಹೋಗುವ ಭಯವಿದೆ. ಈ ಅಮೃತಶಿಲೆಗಳನ್ನು ಕೀಳುವುದಕ್ಕೆ ಯುಬೆನ್ ಕೇನ್ ವೆಚ್ಚ ಮಾಡುವ ಹಣದ ಅರ್ಧದಷ್ಟು ಅವುಗಳಿಗೆ ಬೆಲೆ ಬರುವುದಿಲ್ಲ"

''ಈ ಯುಬೆನ್‌ಕೇನ್ ಯಾರು?''

''ಗೊತ್ತಿಲ್ಲ ರಾಯರೇ, ಹೆಸರಿನಿಂದ ಪರದೇಶಿಯಿರಬೇಕೆಂದು ಅನಿಸು ತ್ತದೆ.–ರಶಿಯನ್ನನೋ ಪೋಲನೋ ಇದ್ದಿರಬಹುದಲ್ಲವೆ? ವಿದ್ಯುತ್ತಿನ ಮತ್ತು ನೀರಿನ ವೆಚ್ಚವನ್ನು ಅವರು ನಮ್ಮ ತಲೆಗೆ ಕಟ್ಟಬೇಕೆಂದಿದ್ದರು; ಆದರಿಂದ ಅವರಿಗೆ ಮತ್ತು ಅವರ ಜನರಿಗೆ ಅನುಕೂಲವಾಗುತ್ತಿತ್ತು. ಆದರೀಗ ಅವರ ಆಗ್ರಹದಿಂದ ಏನೂ ಫಲವಿಲ್ಲ. ಅವರಿಗಾಗಿ ನಾವು ಹೆಚ್ಚು ದಿನ ಕೆಲಸ

ಪಡೆಯುವುದಿಲ್ಲ ”

ಬ್ಲೇಕ್ ಹಾಲನ್ನು ಪುನಃ ನಾಲ್ಕೂ ಕಡೆ ನೋಡಿದರು. ಸೂರ್ಯಪ್ರಕಾಶಕ್ಕೆ ಪ್ರವೇಶವಿರಲಿಲ್ಲ ಮಾತ್ರವಲ್ಲ, ಹೊರಗೆ ಯಾರಾದರೂ ಮಾತಾಡಿದುದು ಒಳಗೆ ಕೇಳುತ್ತಿರಲಿಲ್ಲ. ಹಾಲು ಆಫ್ರಿಕೆಯ ಪಿರಾಮಿಡ್ಡಿನ ಗರ್ಭದಲ್ಲಿಯ ಸಮಾಧಿಗಹ್ವರವೋ ಏನೋ!

ಬಳಿಕ ಬ್ಲೇಕ್ ಪಕ್ಕದ ಒಂದು ಬಾಗಿಲನ್ನು ತೆರೆದು ಮಿಸ್ತ್ರಿಗಳ ಕಾರಖಾನೆಯ ಹೊರಭಾಗಕ್ಕೆ ಬಂದರು. ಆ ಕಡೆಯಲ್ಲಿ ತಮ್ಮ ಅನುಸರಣಕಾರಿಗಳ ಸುಳಿವು ಅವರಿಗೆ ಕಂಡುಬರಲಿಲ್ಲ. ಅವರು ಬೇಕರ್ ಸ್ಟ್ರೀಟಿಗೆ ಹೋಗುವ ಒಂದು ಬಸ್ಸನ್ನು ಹತ್ತಿ, ಅದರ ಮೇಲಂತಸ್ತಿನ ಮುಂಬದಿಯ ಆಸನದಲ್ಲಿ ಕುಳಿತರು ಇಲಿನಳಿತ್ತ ಸಂಖ್ಯಾಪದಕದ ನೆನಪಾಯಿತವರಿಗೆ. ಗುಪ್ತಜೇಬಿನಿಂದ ಅದನ್ನು ಹೊರದೆಗೆದು ಅಂಗೈಯಲ್ಲಿಟ್ಟುಕೊಂಡು ಹಗಲ ಬೆಳಕಿನಲ್ಲಿ ಅದನ್ನು ಪರೀಕ್ಷಿಸಿದರು. ಆದರೆ ಅದರ ರಹಸ್ಯಸೂತ್ರವೊಂದೂ ಸಿಕ್ಕಲಿಲ್ಲ.

‘ಒಂದು ಬದಿಯ ಸಂಖ್ಯೆಗೆ ಬಣ್ಣವಿದೆ; ಅದರಿಂದಲೇ ಅದು ರಾತ್ರಿ ಕಾಣುತ್ತದೆ. ಆದರೆ ಹೀಗೆ ರಾತ್ರಿಯಲ್ಲಿ ಕಾಣುವಂತೆ ರಚಿಸುವ ಆಗತ್ಯವೇನೋ ತಿಳಿಯುಲೊಲ್ಲದು.’–ಬ್ಲೇಕ್ ಮನದಲ್ಲಿಯೇ ಅಂದುಕೊಂಡರು. ಅವರು ಏನೊಂದೂ ನಿರ್ಧಾರಕ್ಕೆ ಬರಲಾರದೆ ಪದಕವನ್ನು ಪುನಃ ಇದ್ದಲ್ಲಿರಿಸಿ, ಬಸ್ಸಿನಿಂದಿಳಿದು ಚಿಂತಾಕುಲ ಚಿತ್ತದಿಂದ ತಮ್ಮ ಕುಳ್ಳಿರುವ ಕೋಣೆಯನ್ನು ಪ್ರವೇಶಿದರು.

ಕೂಡಲೆ ಟ್ರಂಜ್ ಟ್ರಂಜ್ ಫೋನಿನ ಕರೆ.

“ಯಾರು ನೀವು? ಏನು ಕೆಲಸ?” ರಿಸೀವರ್ ಎತ್ತಿಕೊಂಡು ಮಾತನಾಡಿದರು ಬ್ಲೇಕ್.

“ನೀವು ಸುರಕ್ಷಿತವಾಗಿ ಮನೆ ತಲುಪಿದಿರಷ್ಟೇ! ಯಾವ ಉದ್ದೇಶದಿಂದ ನೀವಲ್ಲಿ ಹೋಗಿದ್ದಿರಿ? ಏನು ಮಾಡಿ ಬಂದಿರಿ?” ಆ ಕಡೆಯಿಂದ ಬಂದ ಧ್ವನಿ ಬಿಲ್ ಮಿಲರನದು.

“ಎಲ್ಲಿ ಹೋಗಿದ್ದೆ?”

“ಹೋಟೆಲಿನ ಕೆಡವಿದ ಮನೆಗೆ. ಅಲ್ಲಿ ನಿಮಗೆ ವಿಪತ್ತಿನ ಭಯ ಕಡಿಮೆಯಿರಲಿಲ್ಲ ಒಡೆಯರೆ ಕಳೆದ ಅರ್ಧ ಗಂಟೆಯಿಂದಲೂ ನಿಮ್ಮ ಬಗ್ಗೆ

ನನಗೆ ಬಹಳ ಚಿಂತೆಯುಂಟಾಗಿತ್ತು.''

ಬ್ಲೇಕ್ ನಕ್ಕರು: "ನನ್ನ ವಿಷಯದಲ್ಲಿ ನಿನಗಿರುವ ಕಳವಳವನ್ನು ಕಂಡು ಸಂತೋಷವಾಗುತ್ತಿದೆ. ಯಾರೋ ಇಬ್ಬರು–ಏನು ಉದ್ದೇಶವೋ ಏನೋ ಗೊತ್ತಿಲ್ಲ–ಬಹಳ ದೂರ ನನ್ನನ್ನು ಅನುಸರಿಸಿದ್ದರು. ಅವರಿಂದ ತಪ್ಪಿಸಿಕೊಳ್ಳುವುದಕ್ಕಾಗಿ ನಾನು ಮಾಡಿದ ಉಪಾಯ ನಿನಗೆ ತಿಳಿದಂತೆ ಕಾಣುತ್ತದೆ. ಅವರ ಕಣ್ಣಿಗೆ ಮಣ್ಣೆರಚಿ ಮನೆಗೆ ಬಂದೆ.''

''ನೀವು ಹಾಗೆ ಮಾಡದಿದ್ದರೂ ನಷ್ಟವೇನಿರಲಿಲ್ಲ. ಅವರು ನನ್ನ ಜನ. ಅವರಲ್ಲಿ ಒಬ್ಬನನ್ನು ಹಿಡಿದು ನೀವು ಚೆನ್ನಾಗಿ ಗುದ್ದಿದಿರಿ. ದಾರಿಯಲ್ಲಿ ನಿಮಗೆ ಏನಾದರೂ ವಿಪತ್ತು ಒದಗೀತು, ಹಠಾತ್ತನೆ ಯಾರಾದರೂ ನಿಮ್ಮ ಮೇಲೆ ಬಿದ್ದಾರು ಎಂಬ ಭಯದಿಂದ, ನಿಮ್ಮ ಚಲನವಲನದ ಮೇಲೆ ಕಣ್ಣಿಡುವುದ ಕ್ಕಾಗಿ ಅವರನ್ನು ಕಳಿಸಿದ್ದೆ ನಾನು. ಸಿಜಾರೆ ಎಂಥ ಭಯಂಕರ ಪ್ರಾಣಿ ಎಂಬುದು ನಿಮಗೆ ಕಿಂಚಿತ್ ತಿಳಿದಿದೆಯಲ್ಲವೆ? ಅವನ ಮೋರೆಗೆ ಬೂಟಿ ನಿಂದೊದ್ದು ಬಂದವರನ್ನು ಅವನು ಸಹಜವಾಗಿ ಬಿಟ್ಟಾನೇ?"

ಬ್ಲೇಕ್ ಈ ಮಾತಿಗೆ ಉತ್ತರ ಕೊಡಲಿಲ್ಲ "ನಿನ್ನ ಅನುಚರರು ನನ್ನನ್ನು ಹಿಂಬಾಲಿಸಿದ್ದರೆ? ನಿನ್ನ ಶಿಷ್ಟಾಚಾರಕ್ಕಾಗಿ ಋಣಿಯಾಗಿದ್ದೇನೆ. ನಿನ ಗಾಗಿ ನಾನೇನು ಮಾಡಬೇಕು? ಪ್ರತ್ಯುಪಕಾರವೇನು?" ಎಂದು ಕೇಳಿದರು.

''ಬೇಡ; ಉಪಕಾರದ ಆಶೆಯಿಂದ ಮಾಡಿದ ಕೆಲಸ ಅಲ್ಲ ಅದು. ಅಪಾಯವಾಗಬಾರದೆಂಬುದೇ ನನ್ನ ಲಕ್ಷ್ಯವಿತ್ತು. ನೀವು ಜಾಗರೂಕರಾಗಿರ ಬೇಕೆಂಬುದೇ ನನ್ನ ಆಗ್ರಹದ ಬಿನ್ನಹ. ಇನ್ನು ಮುಂದೆ ಒಬ್ಬರೇ ಹೊರಗೆ ಹೋಗಬೇಡಿರಿ."

''ಬಿಲ್, ನನಗೆ ಅಮಂಗಲವಾಗಬಾರದೆಂದು ನೀನಿಷ್ಟು ಚಡಪಡಿಸಲು ಕಾರಣವೇನು?'' ಬ್ಲೇಕ್ ನಸುನಕ್ಕು ಕೇಳಿದರು.

ಬಿಲ್ ಕೆಮ್ಮಿ ಗಂಟಲು ಸರಿಮಾಡಿಕೊಂಡು ಉತ್ತರವಿತ್ತ: ''ಶೀಘ್ರ ದಲ್ಲಿಯೇ ಒಂದು ವಿರಾಟ್ ಪ್ರಕರಣ ನಡೆಯುವುದೆಂದು ನನಗೆನಿಸುತ್ತಿದೆ. ಹಾಂ, ಅತ್ಯಂತ ಬೃಹತ್ಪ್ರಕರಣ! ಅದನ್ನು ತಡೆಯುವ ಶಕ್ತಿ ಇಂಗ್ಲಂಡಿನಲ್ಲಿ ನಿಮ್ಮೊಬ್ಬರಿಗೆ ಮಾತ್ರ ಇದೆ. –ತಿಳಿಯಿತೇ ನಾನು ಹೇಳುವುದು?''

ಬ್ಲೇಕ್ ತಮ್ಮೊಳಗೇ ಎಂದುಕೊಂಡರು: 'ನಿಮಗಾಗಿ ಬೆಂಕಿಯಲ್ಲಿ

ಕೈಹಾಕಿ ಬಟಾಟೆ ಸುಟ್ಟು ತೆಗೆಯಬೇಕಾಗಿದೆ. ನಾನು–ಅದಕ್ಕಾಗಿ ನನ್ನನ್ನು ಸುರಕ್ಷಿತವಾಗಿಡುವುದು ಅವಶ್ಯ! ನನಗೊಳ್ಳೇ ಅನುಕೂಲವಾದ ಮಾತೇ ಸರಿ!' ಬಳಿಕ ಬಿಲ್ ಮಿಲರನಿಗೆಂದರು: "ಬಿಲ್, ನಿನ್ನಲ್ಲಿ ನನ್ನ ಒಂದೆರಡು ಮಾತು ಇವೆ."

"ಯಾವ ಬಗ್ಗೆ?"

"ನನ್ನನ್ನು ಭೆಟ್ಟಿಯಾದರೆ ಗೊತ್ತಾಗುತ್ತದೆ. ಎಲ್ಲಿಯಾದರೆ ಅನು ಕೂಲ?"

ತನ್ನ ಪರಿಚಯದ ಒಂದು ಸ್ಥಳವನ್ನು ಬಿಲ್ ಸೂಚಿಸಿ ಬಳಿಕ ಹೇಳಿದ: "ನನ್ನೊಬ್ಬ ಅನುಚರ ಈಗ ನಿಮ್ಮ ಮನೆ ಕಾಯುತ್ತಿದ್ದಾನೆ; ನೀವು ಮನೆ ಯಿಂದ ಹೊರಟರೆ ಅವನು ನಿಮ್ಮನ್ನು ಅನುಸರಿಸುವನು; ದಾರಿಯಲ್ಲಿ ನಿಮಗೆ ವಿಪತ್ತೊದಗಬಾರದೆಂಬ ಕಡೆ ಅವನು ಗಮನಕೊಡುತ್ತಾನೆ."

ಆಮೇಲೆ ಬ್ಲೇಕ್ ಮಿಲರ್ ಹೇಳಿದ ಸ್ಥಳಕ್ಕೆ ಹೋದರು. ಗ್ರೀಕ್ ಸ್ಟ್ರೀಟಿನ ಹತ್ತಿರದ ಒಂದು ಕ್ಷುದ್ರ ಅಸ್ವಚ್ಛ ಉಪಾಹಾರಗೃಹ. ಮನೆಯಿಂದ ಅವರನ್ನು ಅನುಸರಿಸಿ ಬಂದಿದ್ದ ಪುಂಡನು ಅವರು ಉಪಹಾರಮಂದಿರವನ್ನು ಪ್ರವೇಶಿಸುತ್ತಲೇ ಅದೃಶ್ಯನಾಗಿಬಿಟ್ಟ.

ಉಪಾಹಾರಗೃಹದ ಏಕಾಂತ ಕೋಣೆಯೊಂದರಲ್ಲಿ ಒಂದು ಮೇಜಿನ ಪಕ್ಕದಲ್ಲಿ ಕುಳಿತು ಸುರೇಶ್ವರಿಯ ಆರಾಧನೆ ನಡೆಸಿದ್ದ. ಆಗವನು ಬ್ಲೇಕರ ಹಾದಿಯನ್ನೇ ನೋಡುತ್ತಿದ್ದ. ಅವರು ಹೋಗಿ ಅವನ ಎದುರಿನ ಕುರ್ಚಿಯಲ್ಲಿ ಕುಳಿತು,

"ಯುಬೆನ್‌ಕೇನ್ ಎಂಬವನನ್ನು ನೀನು ಬಲ್ಲೆಯಾ?" ಎಂದು ಪ್ರಶ್ನಿ ಸಿದರು.

"ಹಾಂ; ಬಲ್ಲೆ."

"ಯಾವ ದೇಶದವನು?"

"ಆರ್ಮೇನಿಯನ್."

"ಹೆಡ್ಡನೇನು ಆ ಮನುಷ್ಯ?"

ಬಿಲ್ ವಿಸ್ಮಿತಭಾವದಿಂದ ಅವರ ಮೋರೆಯನ್ನು ನೋಡಿ ಉತ್ತರವಿತ್ತ: "ಹೆಡ್ಡ! ನೀವೇನೆನ್ನುತ್ತಿರುವಿರಿ? ಅಸಂಬದ್ಧ ಕಲ್ಪನೆಯೇ ಇದು. ನಿಮಗಿರು

ವಷ್ಟೇ ಬುದ್ಧಿ ಅವನಿಗಿದೆ ಒಡೆಯರೆ, ಗುಂಜಿ ತೂಕ ಕಡಿಮೆಯಿಲ್ಲ."

"ಚೆನ್ನಾಗಿ ಬಲ್ಲೆಯಾ?"

"ಗೊತ್ತಿಲ್ಲದೆ ಹೇಳುತ್ತೇನೆಯೆ? ಯಹೂದಿಯ ತಲೆ ಅದು—ಎಂದಿಗೂ ಬರಡಲ್ಲ. ಮನುಷ್ಯ ನಿಜವಾಗಿ ಚತುರ, ಬಹುಧೂರ್ತ!"

"ಆದರೆ,—ಅವನು ಒಂದು ಮನೆ ಕೊಂಡಿದ್ದಾನೆ; ಅದರ ಸಂಗಮರವರಿ ಕಲ್ಲುಗಳನ್ನೆಲ್ಲ ಕಿತ್ತಿಕೊಂಡು ಒಯ್ಯುವನೆಂದು ಕೇಳಿದ್ದೇನೆ. ಆದರೆ ಕಿತ್ತಿದರೆ ಅವು ಕೆಟ್ಟುಹೋಗುತ್ತವೆ; ಕಿತ್ತುವುದಕ್ಕೆ ತಗಲುವ ವೆಚ್ಚದ ಅರ್ಧದಷ್ಟೂ ಬೆಲೆ ಬರುವುದಿಲ್ಲ; ಆದರೂ ಅವನ್ನು ಕಿತ್ತಿ ಒಯ್ಯುವ ಆಗ್ರಹವಂತೆ! ಇದು ಬುದ್ಧಿವಂತರ ಲಕ್ಷಣವ್ರೋ ಇದು?"

ಬ್ಲೇಕರ ಮಾತು ಕೇಳಿ ಮಿಲರನ ಹುಬ್ಬು ಗಂಟಿಕ್ಕಿದವು. ಸಂದಿಗ್ಧ ದೃಷ್ಟಿಯಿಂದ ಅವರ ಮೊಗವನ್ನು ನೋಡುತ್ತ "ನಿಮ್ಮ ಮಾತು ಅರ್ಥವಾಗ ಲಿಲ್ಲ. ಎಲ್ಲಿವೆ ಆ ಸಂಗಮರವರಿ ಕಲ್ಲು?" ಎಂದು ಕೇಳಿದ.

"ಕಾಸ್ಮೋಪೊಲಿಸ್ ಹೋಟೆಲಿನ ಮೇಲಟ್ಟಕ್ಕೆ ಹೊಂದಿದ ಒಂದು ಮನೆಯಲ್ಲಿ."

ಮಿಲರ್ ಕೊಂಚ ಯೋಚಿಸಿ ಉತ್ತರವಿತ್ತ: "ಇಲ್ಲಿ ನೋಡಿರಿ ರಾಯರೆ, ಈ ವಿದೇಶಿಗಳು ಯಾವ ಉದ್ದೇಶದಿಂದ ಏನು ಮಾಡುವರೆಂಬುದು ನಮಗೆ ತಿಳಿಯಲಸಾಧ್ಯ. ಕಾಸ್ಮೋಪೊಲಿಸ್ ಹೋಟೆಲೆಂದು ಹೇಳಿದಿರಲ್ಲವೆ? ಅದರ ವಿಷಯ ನನಗೊಂದೂ ತಿಳಿಯದು; ಆ ವಿಷಯವನ್ನು ಆಲೋಚಿಸುವ ಇಚ್ಛೆಯೂ ಇಲ್ಲ."

"ಏಕೆ? ಅದಕ್ಕೆ ಸಿಜಾರೆ ಜೇನಾದ ಸಂಬಂಧವಿರಬೇಕಲ್ಲವೆ?"

"ಅದನ್ನೇನೂ ಖಂಡಿತ ಹೇಳಬರುವಂತಿಲ್ಲ. ಆದರೆ ಅವರಿಬ್ಬರೂ ಆಗೀಗ ಕೂಡಿರುವುದನ್ನು ನೋಡಿದ್ದೇನೆ. ಅವರಿಬ್ಬರಲ್ಲಿ ಗೆಳೆತನವಿರಬೇಕೆಂದು ನನಗೆನಿಸುತ್ತದೆ."

ಬ್ಲೇಕ್ ಒಂದು ಗ್ಲಾಸನ್ನೆತ್ತಿಕೊಂಡು ಮಾತನಾಡಿದರು: "ಹುಂ! ಇಲ್ಲಿ ನೋಡು ಬಿಲ್, ನನ್ನ ಒಂದು ಪ್ರಶ್ನೆಗೆ ಉತ್ತರ ಕೊಡಬಲ್ಲೆಯಾ ನೀನು ಕಾಸ್ಮೋಪೊಲಿಸ್ ಹೋಟೆಲಿನ ಬಹುಭಾಗವನ್ನು ಕೆಡವಲಾಗಿದೆ; ಅದರಲ್ಲಿ ಸಿಜಾರೆಯ ಸ್ವಾರ್ಥ ಸಂಬಂಧವೇನಾದರೂ ಇರಬಹುದೇನು?"

ಮಿಲರ್ ಚಿಂತಿತಭಾವದಿಂದ ಉತ್ತರವಿತ್ತ: "ಅದೊಂದು ಮಂಗ ನಾಟದ ಒಗಟು. ಒಳಗೆ ಏನು ರಹಸ್ಯವಿದೆಯೋ ಹೇಗೆ ಹೇಳಲಿ? ನನ್ನ ವಿಚಾರದಲ್ಲಂತೂ ಅದರ ಅರ್ಥ ತಿಳಿದಿಲ್ಲ."

"ಅದರೆ ಸಿಜಾರೆ ಯಾವ ಬಲೆ ಹೆಣೆದಿದ್ದಾನೆ, ಈಗ ಏನು ಮಾಡ ಬೇಕೆಂದು ನಿಶ್ಚಯಿಸಿದ್ದಾನೆ, ಹೇಳಬಹುದೆ? ಒಂದು ವಿರಾಟ್ ವಿಪಜ್ಜನಕ ಪ್ರಕರಣದ ಮಾತು ಆಡಿದೆಯಲ್ಲ–ಯಾವ ಪ್ರಕರಣ ಅದು? ನೀನು ಸಭಯ ವಾಗಿ ಆ ಘಟನೆಯನ್ನು ನಿರೀಕ್ಷಿಸಿಕೊಂಡಿದ್ದರೂ ಅದೇನೆಂದು ಹೇಳಲಿಲ್ಲ. ನಿನ್ನ ಮನದ ಮಾತನ್ನು ನೀನು ನಿಃಶಂಕವಾಗಿ ಪ್ರಕಟಿಸಬಹುದು. ಯಾರ ಯಾವ ಗುಪ್ತ ವಿಷಯವನ್ನೂ ಅನ್ಯರೆದುರು ಹೇಳುವುದಿಲ್ಲ ನಾನು. ಇಷ್ಟೇ ಅಲ್ಲ, ಆ ವಿಷಯ ಮಹತ್ವದ್ದಾಗಿದ್ದರೆ, ಪುರಸ್ಕಾರ ಯೋಗ್ಯವಾಗಿದ್ದರೆ ಅವರಿಗೆ ಪುರಸ್ಕಾರವನ್ನೂ ಕೊಡುವೆ."

ಬಿಲ್ ಮುಖ ತಗ್ಗಿಸಿಕೊಂಡು ವಿಚಾರಕ್ಕೊಳಗಾದ. ಬ್ಲೇಕರ ಮುಂದೆ ಈ ವಿಷಯವನ್ನು ಪ್ರಕಾಶಪಡಿಸುವುದು ಸಂಗತವೇ ಅಲ್ಲವೇ ಎಂಬುದೇ ಅವನ ಯೋಚನೆ. ಚೋರ ತಸ್ಕರರು ಯಾವ ಗುಪ್ತ ವಿಷಯವನ್ನೂ ತುಬ್ಬು ಗಾರರ ಮುಂದೆ ಸಹಜವಾಗಿ ಹೇಳುವವರಲ್ಲ. ಸಂಬಂಧ ಪೋಲಿಸರೊಡನೆ ಇಲ್ಲದಿದ್ದರೂ ಅವರು ಪತ್ತೆದಾರರು, ಅವರಿಗೆ ಗುಟ್ಟಿನ ಮಾತನ್ನು ತಿಳಿಸಿದರೆ ಮುಂದೆ ತನಗೆ ತೊಂದರೆಯಾದೀತು ಎಂಬ ವಿಚಾರದಿಂದ ಅವನು ಚಿಂತಾ ಕುಲನಾಗಿ ತಲೆತುರಿಸಿಕೊಳ್ಳತೊಡಗಿದ. ಅವನಿಗೆ ಉಭಯ ಸಂಕಟ.

ಬ್ಲೇಕ್ ಅವನ ಮನೋಭಾವವನ್ನರಿತು, ಅವನ ಸಂಕೋಚದ ಕಾರಣ ವನ್ನು ತಿಳಿದು, ಅವನಿಗೆ ಅಭಯದಾನ ಮಾಡುವ ಉದ್ದೇಶದಿಂದ ಹೇಳಿ ದರು: "ನೀನು ಕುಂಠಿತನಾಗುವ ಕಾರಣವಿಲ್ಲ ಬಿಲ್. ನಾನು ಹೇಳಿದ್ದೇ ನಲ್ಲ, ಒಬ್ಬರ ಗುಟ್ಟಿನ ಮಾತನ್ನು ಇನ್ನೊಬ್ಬರೆದುರು ರಟ್ಟುಮಾಡುವುದಿಲ್ಲ. ನಿನ್ನ ಒಳಮಾತು ಮತ್ತೊಬ್ಬರಿಗೆ ಗೊತ್ತಾದರೆ, ನಿನಗೆ ಬಿಂದುಮಾತ್ರವಾದರೂ ವಿಪತ್ತಿನ ಭಯವಿರುವುದಾದರೆ, ನಾನಾ ಮಾತನ್ನು ಯಾರಿಗೂ ತಿಳಿಯಗೊಡು ವುದಿಲ್ಲ. ನನ್ನ ವಚನವನ್ನು ನಿಃಶಂಕವಾಗಿ ನಂಬಬಹುದು."

ತೀಕ್ಷ್ಣದೃಷ್ಟಿಯಿಂದ ಬ್ಲೇಕರ ಮುಖವನ್ನು ನೋಡುತ್ತ ಬಿಲ್ ಮಿಲರ್ "ನೀವು ನನ್ನ ಮಾತನ್ನು ಗುಪ್ತವಾಗಿಡುವಿರೊ? ಸ್ಕಾಟ್ಲೆಂಡ್ ಯಾರ್ಡಿನ

ಜನಕ್ಕೆ ತಿಳಿಸುವುದಿಲ್ಲವೋ?" ಎಂದು ಕೇಳಿದ.

"ಒಂದೇ ಮಾತನ್ನು ಎಷ್ಟು ಸಲ ಹೇಳಲಿ? ನಿನ್ನ ನನ್ನ ಹೊರತು ಮೂರನೆಯವರಿಗೆ ಅದು ತಿಳಿಯಲಾರದು. ನಾನು ಯಾರಿಗೂ ಹೇಳುವುದಿಲ್ಲ."

ಬಿಲ್ ನಿಮ್ನಸ್ವರದಲ್ಲಿ ಆರಂಭಿಸಿದ:

"ಸಿಜಾರೆಯ ಉದ್ದೇಶವೇನು, ಅವನ ಆಕಾಂಕ್ಷೆ ಏನು,–ನೀವರಿಯರಿ. ಉಪಾಯವಾಗಿ ನಾನದನ್ನು ಅರಿತುಕೊಂಡಿದ್ದೇನೆ. ಸಿಕಾಗೋದ ದಸ್ಯು ಸಾರ್ವಭೌಮನಾದ ಅಲ್ ಕಾಪೋನನ ಹೆಸರು ಕೇಳಿರಬಹುದು ನೀವು. ಅವನ ಹಾಗೆ ಲಂಡನಿನಲ್ಲಿ ಎಲ್ಲ ದಸ್ಯು ದಲಗಳ ಮೇಲೂ ತನ್ನ ಅಧಿಕಾರವನ್ನು ಸ್ಥಾಪಿಸಿ ತಾನು ಸಮ್ರಾಟ್ ಸತ್ತಾಧೀಶನಾಗಬೇಕೆಂಬುದು ಸಿಜಾರೆಯ ಮಹತ್ವಾಕಾಂಕ್ಷೆ. ಅದಕ್ಕಾಗಿ ದೀರ್ಘಕಾಲದಿಂದಲೂ ಅವನ ಪ್ರಯತ್ನ ನಡೆದಿದೆ; ತನ್ನ ಸುವಿಸ್ತೀರ್ಣ ಕಾರ್ಯಕ್ಷೇತ್ರದಲ್ಲಿಯ ಸಕಲ ವಿಘ್ನ–ವಿರೋಧಗಳನ್ನು ದೂರಗೊಳಿಸಲು ಅವನು ಹೆಣಗುತ್ತಿದ್ದಾನೆ. ಈ ದಾರಿಯಲ್ಲಿ ಅವನ ಪ್ರಗತಿ ಮಂದವಾಗಿದ್ದರೂ ಇಂದಿಲ್ಲ ನಾಳೆ ಕಾರ್ಯಸಿದ್ಧಿಯಾಗುವದೆಂಬಲ್ಲಿ ಅವನಿಗೆ ಸಂದೇಹವೇ ಇಲ್ಲ. ಈ ವಿಷಯದಲ್ಲಿ ನನಗೂ ವಿಶ್ವಾಸವಿದೆ. ಹಾಂ, ತನ್ನಿಷ್ಟವನ್ನು ಈಡೇರಿಸಿಕೊಳ್ಳದೆ ಬಿಡುವ ಆಸಾಮಿ ಅಲ್ಲ ಅವನು. ನಾನೂ ನೀವೂ ಅವನ ಸಂಕಲ್ಪವನ್ನು ವ್ಯರ್ಥಗೊಳಿಸಲು ಸರ್ವಪ್ರಯತ್ನಗಳನ್ನೂ ಮಾಡಬೇಕು. ಅವನನ್ನು ದಸ್ಯು ಪ್ರಪಂಚದ ಏಕಚ್ಛತ್ರಾಧಿಪತಿಯಾಗಗೊಡಲಾರೆ ನಾನು. ಅವನ ಮಹತ್ವಾಕಾಂಕ್ಷೆಯನ್ನು ವಿಫಲಗೊಳಿಸಿದರೆ ನಿಮ್ಮ ಕೀರ್ತಿಗೌರವಗಳು ಹೆಚ್ಚುವವು ದೇಶಕ್ಕೂ ಸಮಾಜಕ್ಕೂ ನಿಮ್ಮಿಂದ ಮಹೋಪಕಾರವಾದಂತಾಗುವುದು."

—ಬಿಲ್ ಆವೇಶದಿಂದ ಎದುರಿನ ಮೇಜನ್ನು ಗುದ್ದಿದ; ಅವನ ಕಣ್ಣುಗಳು ಹೊಳೆದವು. ಅವನ ಆವೇಗ ಕಂಪಿತ ಸ್ವರದಲ್ಲಿ ಹಾರ್ದಿಕತೆಯನ್ನು ಕಂಡರು ಬ್ಲೇಕ್. ಕೊನೆಗೆ ಅವನೆಂದ:

"ಹಾಂ, ನೀವು ಮತ್ತು ನಾನು ಕೂಡಿ ಪ್ರಯತ್ನಿಸಿದರೆ ಅವನ ದುರ್ದಮ್ಯ ಹೋರಾಟವನ್ನು ವಿಫಲಗೊಳಿಸುವುದು ಅಸಂಭವವಲ್ಲ."

ಅದೇ ಹೊತ್ತಿಗೆ ಉಪಾಹಾರಭವನದ ಪಕ್ಕದ ಬೀದಿಯಲ್ಲಿ ಏನೋ ಶಬ್ದವಾಯಿತು; ಸಂಗಡಲೇ ಯಾರದೋ ಚೀತ್ಕಾರವೂ ಕೇಳಿಸಿತು.

ಅದು ಎಚ್ಚರಿಸುವ ಸಂಕೇತ. ಕೂಡಲೇ ಬಿಲ್ ಬ್ಲೇಕರನ್ನು ಕೈಹಿಡಿದೆಳೆದು ಬೋರಲಾಗಿ ನೆಲಕ್ಕೆ ಕೆಡಹಿದನು; ತಾನೂ ಮೇಜಿನ ಬುಡದಲ್ಲಿ ಹೊಕ್ಕು ನೆಲಕ್ಕೆ ಮೋರೆ ಹಚ್ಚಿ ಬಿದ್ದುಕೊಂಡ.

"ಫ್ರ್-ರ್-ರ್"

ಕಿಡಿಕಿಯ ಬಾಗಿಲ ಮೇಲೆ ಶಬ್ದವಾಯಿತು. ಕಿಡಿಕಿಯ ಕಾಜುಗಳೊಡೆದು ಚೂರು ಚೂರಾಗಿ ಸೂರೆಯಾದವು. ಕೋಣೆಯೊಳಗೆ ಗುಂಡುಗಳ ಮಳೆ ಆರಂಭವಾಯಿತು. ತತ್‌ಕ್ಷಣವೇ ಬಿಲ್ ಮೇಜನ್ನು ಅಡ್ಡ ಕೆಡವಿ ಅದರ ಹಿಂದೆ ಮೈಮರೆಸಿಕೊಂಡ ಗುಂಡು ಮೇಜಿನ ಮೇಲ್ಮೈಗೆ ಬಡಿದು ಬಿದ್ದಿತು.

ಆದರೆ ಗುಂಡಿನ ಮಳೆ ಒಂದು ಕ್ಷಣದಲ್ಲಿಯೇ ಮುಗಿಯಿತು. ಇಂಜಿನಿನ ಫುಸ್ ಫುಸ್ ಶಬ್ದ ಕೇಳಿಸಿತು; ಕಿಡಿಕಿಯ ಬಳಿಯಿಂದ ಶಕಟವೊಂದು ಭರದಂಡೆ ವೇಗದಿಂದ ಹೊರಟುಹೋಯಿತು. ಆಗ ಬಿಲ್ ಮಿಲರ್ ಮೇಜನ್ನು ಒದೆದು ಸರಿಸಿ ಚಟ್ಟನೆದ್ದು, ಸರಕ್ಕನೆ ಕೋಣೆಯ ಬಾಗಿಲ ಬಳಿ ಹೋಗಿ ನಿಂತ.

ಅಷ್ಟರಲ್ಲಿ ಒಬ್ಬ ಮನುಷ್ಯ ಹೊಯ್ದಾಡುತ್ತ ಬಂದು ಆ ಕೋಣೆಯ ಬಾಗಿಲೊಳಗೆ ಪ್ರವೇಶಿಸಿದ. ಬ್ಲೇಕರನ್ನು ಅನುಸರಿಸಿ ಉಪಾಹಾರಭವನದ ವರೆಗೆ ಬಂದಿದ್ದ ಮನುಷ್ಯನೇ—ಅವನ ಗುಂಪಿನವನೇ-ಅವನು. ಮಿಲರನನ್ನು ಕಾಣುತ್ತಲೇ ಅವನಿಗೆ ಸ್ವಲ್ಪ ಸಮಾಧಾನವಾಯಿತು.

"ಆಃ, ನಿಮ್ಮನ್ನು ನಾಶಗೊಳಿಸುವ ಅವರ ಉದ್ದೇಶ ನಿಷ್ಫಲವಾದಂತೆ ಕಾಣುತ್ತದೆ!" ಎಂದನಾ ಮನುಷ್ಯ.

"ಈ ಬಾರಿಯಂತೂ ನಿಷ್ಫಲವಾಯಿತು. ಏನು ಸಮಾಚಾರ?" ಬಿಲ್ ಕೇಳಿದ.

"ಸಬ್–ಮಶಿನ್‌ಗನ್ನು ಒಬ್ಬನು ಕಿಡಿಕಿಗೆ ಗುಂಡಿಕ್ಕಿದ. ಬೀದಿಯ ಆಕಡೆಗಿದ್ದ ಸ್ಟ್ಯಾಂಡಿನಲ್ಲಿ ಅವರು ಗಾಡಿ ನಿಲ್ಲಿಸಿದ್ದರು. ಅವರು ಸ್ಟೀವನನ್ನು ಗಾಯಗೊಳಿಸಿದ್ದಾರೆ-ಅದೋ--ಬೀದಿಪಕ್ಕದ ಕಾಲುವೆಯಲ್ಲಿ ಬಿದ್ದಿದ್ದ ನರದೇಹದ ಕಡೆಗೆ ಅನುಚರನು ಬೆರಳು ತೋರಿಸಿದ. "ಅವರು ಬಂದದ್ದು ನಿಮ್ಮ ನಾಶಕ್ಕಾಗಿಯೇ. ದೈವ ಚೆನ್ನಾಗಿತ್ತು; ನಾನು ನಿಮ್ಮನ್ನು ಎಚ್ಚರಿಸಿದೆ." ಎಂದು ನುಡಿದು ತನ್ನ ಕೈಯೊಳಗಿನ ದಂಡವನ್ನು ಮೇಲೆತ್ತಿ, "ನಾನೂ ಅವನ

ಕ್ಕೈಗೆ ಒಂದು ಛಲೋ ಏಟು ಕೊಟ್ಟೆ" ಎಂದ.

ಬಿಲ್ ಮುಖ ತಿರುಗಿಸಿ ಬೀದಿಯ ಕಡೆ ನೋಡಿದ. ಅಷ್ಟರಲ್ಲಿ ಬ್ಲೇಕರು ಮೇಜು ಕುರ್ಚಿಗಳ ಸಂದಣಿಯೊಳಗಿಂದ ಎದ್ದುನಿಂತರು.

"ಎಲ್ಲವೂ ಪರಿಷ್ಕಾರವಾಗಿದೆ!"

ಎಂದು ನುಡಿದು ಬಿಲ್ಲನ ಅನುಚರನು ಬೀದಿಗೆ ಧಾವಿಸಿದ. ಆಗ ಸ್ಟೀವನು ಕಾಲುವೆಯೊಳಗಿಂದ ಎದ್ದುನಿಲ್ಲಲು ಪ್ರಯತ್ನಿಸುತ್ತಿದ್ದ. ಅವನ ಮೈಯಲ್ಲಿ ಅನೇಕ ಕಡೆ ರಕ್ತ ಸೋರುತ್ತಿತ್ತು. ಅಷ್ಟರಲ್ಲಿ ಅತ್ಯಾಚಾರಿಗಳ ಗಾಡಿ ಓಣಿಯ ತುದಿಯಲ್ಲಿ ಹೊರಳಿ ಅದೃಶ್ಯವಾಗಿತ್ತು.

"ಇವು ಸಿಜಾರೆ ಕೊಟ್ಟ ಉಡುಗೊರೆ; ಇದಕ್ಕೆ ತಕ್ಕ ಪ್ರತ್ಯುಪಹಾರವನ್ನು ಅವನು ನಮ್ಮಿಂದ ಪಡೆಯುತ್ತಾನೆ!" ಬಿಲ್ ಆಹತವ್ಯಕ್ತಿಯ ಗಾಯಗಳತ್ತ ಬೆರಳು ಮಾಡಿ ಬ್ಲೇಕರಿಗೆಂದ.

"ಪಡೆಯುವುದು ಉಚಿತವೆ!" ಬ್ಲೇಕರೆಂದರು.

ಸಿಜಾರೆ ತಮ್ಮ ಮೇಲೆ ಯುದ್ಧವನ್ನೇ ಸಾರಿದ್ದಾನೆ ಎಂದವರು ತಿಳಿದುಕೊಂಡರು ಅಗತ್ಯವಿಲ್ಲದಿದ್ದರೂ ಬಿಲ್ಲನ ಆಗ್ರಹದ ಮೇರೆಗೆ ಬುಲ್‌ಡಾಗ್ ಕಳ್ಳಕೂಟದ ಇಬ್ಬರ ರಕ್ಷಣೆಯಲ್ಲಿ ಬ್ಲೇಕ್ ತಮ್ಮ ಮನೆಗೆ ತೆರಳಿದರು. ಅವರು ಕಿಂಚಿತ್ ಅಂತರದಲ್ಲಿ ಅವರನ್ನು ಹಿಂಬಾಲಿಸಿ ಅವರ ಮನೆಯವರೆಗೂ ಹೋದರು.

ಬ್ಲೇಕ್ ಮಾರಿಸನನ್ನೊಮ್ಮೆ ಕಂಡು ಹೋಗಬೇಕೆ ಎಂದೊಮ್ಮೆ ಯೋಚಿಸಿದರು. ಕೊನೆಗೆ ಪ್ರಕಟವಾಗಿ ಅವನ ಸಂಬಂಧ ಬೆಳೆಸುವುದು ಸರಿಯಲ್ಲವೆಂದೆನಿಸಿತು. ಸಿಜಾರೆಗೆ ತಮ್ಮ ಮತ್ತು ಮಾರಿಸನ ಸಂಬಂಧ ಎಷ್ಟರಮಟ್ಟಿಗೆ ತಿಳಿದಿದೆ ಎಂಬುದು ಗೊತ್ತಾಗದೆ ಹೋದರೂ ಹೆಚ್ಚಿಗೆ ತಿಳಿಯದಿರುವುದು ಲೇಸೆಂದು ಅವರು ಬಗೆದರು.

ಮಾರಿಸ್ ಅಂದು ನಸುಕಿನಲ್ಲಿ ಬ್ಲೇಕರ ಮನೆಯಿಂದ ಅಂಗಡಿಗೆ ಹೋಗಿದ್ದ. ಅವನೊಂದಿಗೆ ಸ್ಮಿತ್ಥನೂ ಅಂಗಡಿಯ ವರೆಗೆ ಹೋಗಿದ್ದ. ಮಾರಿಸನು ತನ್ನ ಅಂಗಡಿಯ ಲೆಕ್ಕಪತ್ರ ಪರೀಕ್ಷೆಗೆ ಒಬ್ಬನನ್ನು ಇಟ್ಟುಕೊಳ್ಳುವುದು ಸ್ವಾಭಾವಿಕ. ಸ್ಮಿಥ್ ಲೆಕ್ಕ ತಪಾಸಿಗನಾಗಿ ಅವನಂಗಡಿಗೆ ಹೋಗಿ ಕೆಲ ಹೊತ್ತು ಲೆಕ್ಕ ನೋಡುತ್ತ ಅಲ್ಲಿದ್ದ. ಆದರೆ ಬಾರುಮಾಡಿದ ಪಿಸ್ತೂಲು ಅವನ

ಜೇಬಿನಲ್ಲಿತ್ತು; ಅವನ ದೃಷ್ಟಿ ನಾಲ್ಕೂ ಕಡೆ ಇತ್ತು. ಏನಾದರೂ ಅಘಟಿತ ಘಟನೆ ಒದಗಿದರೆ ಕೂಡಲೇ ಮನೆಗೆ ಫೋನ್ ಮಾಡಬೇಕೆಂದು ಬ್ಲೇಕ್ ಅವನಿಗೆ ತಿಳಿಸಿದ್ದರು.

ಮನೆಗೆ ಹೋಗುತ್ತಲೂ ಬ್ಲೇಕ್ ಕರೆಗಂಟೆ ಬಾರಿಸಿ ಅಡಿಗೆಯ ಮುದುಕಿಯನ್ನು ಕರೆದರು.

''ನನ್ನನ್ನು ಕರೆದಿರಾ?" ಸ್ಥೂಲದೇಹವನ್ನು ತೂಗುತ್ತ ಕೋಣೆಯೊಳಗೆ ಬಂದು ಕೇಳಿದಳು ಅಡಿಗೆಯವಳು.

"ಹೌದು. ನಾನಿಲ್ಲದಾಗ ಸ್ಮಿಥ್ ಫೋನಿನಲ್ಲಿ ಏನಾದರೂ ಹೇಳಿದನೆ?''

"ಇಲ್ಲ ಧನಿಯರೆ ಫೋನು ಝಣ ಝಣ ಝಣಗುಟ್ಟಿಯೇ ಇಲ್ಲ."

''ಏನಾದರೂ ಕಾಗದ ಬಂದಿವೆಯೆ?''

''ಪತ್ರವನ್ನೇನೂ ಕಾಣಲಿಲ್ಲ ಛಾಪಿಸಿದ ಕಾಗದ ಒಂದು ಮಾತ್ರ ಬಂದಿದೆ—ಎಂಥದೋ ಸರಕಾರೀ ಫಾರ್ಮು. ಈಗೀಗಲಂತೂ ನೋಡುತ್ತೇನೆ—ನಿಮ್ಮ ಪತ್ರದ ಪೆಟ್ಟಿಗೆಯೊಳಗೆ ಸುಡುಗಾಡುಸುಟ್ಟು ಏನೇನೋ ಬಂದುಬೀಳುತ್ತವೆ; ಅವಕ್ಕೇನಾದರೂ ಲೆಕ್ಕವಿದೆಯೆ? ಬರುವುದಕ್ಕೆ ಅಂತವೇ ಇಲ್ಲ. ನಮ್ಮದೊಂದು ಕಿರಾಣಿ ಅಂಗಡಿ ಇದ್ದಿದ್ದರೆ ಅವು ಉಪಯೋಗಕ್ಕೆ ಬರುತ್ತಿದ್ದವು.''

''ಇವತ್ತು ಮತ್ತೇನು ಬಂತು ಮಿಸೆಸ್ ಬಾರ್ಡೇಲ್?"

ಮಿಸೆಸ್ ಬಾರ್ಡೇಲ್ ಒಂದು ಕಾಗದವನ್ನು ತೆಗೆದು ಬ್ಲೇಕರ ಕೈಗೆ ಕೊಟ್ಟಳು. ಸೆನ್ಸಸ್ಸಿನ ಫಾರ್ಮು ಅದು ''ಜನಗಣನೆಯಾಗುವುದಿದೆಯಲ್ಲವೇ, ಅದರ ಫಾರ್ಮು" ಎಂದರು ಬ್ಲೇಕ್

ಶ್ರೀಮತಿ ಬಾರ್ಡೆಲ್ ಮೋರೆ ಸಪ್ಪೆಮಾಡಿ ಎಂದಳು: "ಮನುಷ್ಯರನ್ನು ಎಣಿಸಿ ಕರ ಹೆಚ್ಚಿಸುವರೇನೋ? ಏತೇತರಿಂದಲೂ ತುಂಬಲೊಲ್ಲದು ಹೊಟ್ಟೆ! ಇನ್ನು ತಲೆ ಲೆಕ್ಕದ ಕರವೆ? ನನಗೂ ಕರ ಹಿಡಿಯುವರಲ್ಲವೆ?''

''ತೂಕಮಾಡಿ ಮಣಕ್ಕೊಬ್ಬ ಮನುಷ್ಯನೆಂಬ ಲೆಕ್ಕದಿಂದ ಕರ ಹಾಕಿದರೆ, ನೀನು ನಾಲ್ಕು ಜನರ ಕರ ಕೊಡಬೇಕಾಗುತ್ತದೆ. ತೂಗಿದರೆ ನಾಲ್ಕು ಮಣ ಹತ್ತು ಸೇರು ಆಗುತ್ತೀ ನೀನು. ಮೇಲಿನ ಹತ್ತು ಸೇರಿನ ಲೆಕ್ಕವನ್ನು ಬಿಟ್ಟರೂ ಬಿಡಬಹುದು, ಅತ್ತು ಕರೆದು ಗೋಗರೆದರೆ."

ಅಡಿಗೆಯವಳು ಸರಕಾರಿ ಅಧಿಕಾರಿಗಳನ್ನು ಮನವಾರೆ ಬಯ್ದಳು.

ಬ್ಲೇಕ್ ಕೇಳಿದರು. "ಕರವನ್ನು ಕೊಡದಿದ್ದರೆ ಬಿಡು ನೀನು; ನಿನ್ನ ವಯಸ್ಸೆಷ್ಟು, ಸಧವೆಯೋ ವಿಧವೆಯೋ ಕುಮಾರಿಯೋ, ಉದ್ಯೋಗ ಏನು, ಮನೆ ಎಲ್ಲಿ, ಗಂಡನ ಇಲ್ಲವೆ ಅಪ್ಪನ ಹೆಸರೇನು–ಎಲ್ಲವನ್ನೂ ಬರೆದುಕೊಡ ಬೇಕು. ಹತ್ತು ವರುಷಕ್ಕೊಮ್ಮೆ ಜನರನ್ನು ಎಣಿಸುತ್ತಾರೆ, ಒಬ್ಬರನ್ನೂ ಬಿಡು ವುದಿಲ್ಲ. ತಪ್ಪಿಸಿಕೊಳ್ಳಲು ಆಸ್ಪದವೇ ಇಲ್ಲ. ಆದರೆ ನೀನೇನೂ ವಿಶೇಷ ಮಾಡಬೇಕಾಗಿಲ್ಲ, ನಾನೇ ಎಲ್ಲ ಮಾಡುತ್ತೇನೆ."

"ಎಣಿಸಲಿಕ್ಕೆ ಎಂದು ಬರುತ್ತಾರೆ?"

ಫಾರ್ಮಿನ ಕಡೆ ನೋಡಿ ಬ್ಲೇಕ್ "೨೬ನೇ ರವಿವಾರ" ಎಂದು ಫಾರ್ಮನ್ನು ಬಿಸುಟು ಉತ್ಸಾಹದಿಂದ "ಹಾಂ, ಸರಿಯಾಗಿ ಹೊಂದಿತು!" ಎಂದು ಉದ್ಗರಿಸಿದರು.

"ಏನು ಹೊಂದಿತು ಧನಿಯರೆ?" ಮಿಸೆಸ್ ಬಾರ್ಡೆಲ್ ಆಶ್ಚರ್ಯದಿಂದ ಕೇಳಿದಳು.

"೨೬ನೆಯ ತಾರೀಖಿಗೆ" ಫಾರ್ಮನ್ನು ಎತ್ತಿಕೊಂಡು ನೋಡಿ ಬ್ಲೇಕ್ ಉತ್ತೇಜಿತರಾಗಿ ನುಡಿದರು. "೨೬ನೇ ತಾರೀಖು ಮನೆಮನೆಯಲ್ಲಿ ಬೆಳಕು ಬೆಳಗುವ ದಿನ! ಅಕ್ಷರ ಅರ್ಥವೂ ಈಗ ಪರಿಷ್ಕಾರವಾಯಿತು. ಹಗಲು ಬೆಳಕಿನಲ್ಲಿ ಒಬ್ಬನು ಹೊರಗಿದ್ದರೆ, ಇನ್ನೊಬ್ಬ ಮನೆಯೊಳಗಡೆ ಕಗ್ಗತ್ತಲೆಯಲ್ಲಿ! ಮೊದಲೀ ವಿಷಯ ನನ್ನ ತಲೆಯಲ್ಲಿ ಹೊಳೆದಿರಲಿಲ್ಲ. ಆಶ್ಚರ್ಯ!"

೭

ಎಪ್ರಿಲ್ ೨೫ನೆಯ ತಾರೀಖಿನ ಇಳಿಹೊತ್ತು. ಆಗ ಸ್ಕಾರ್ಲೇಟಿಯ ಅಂಗಡಿಯಲ್ಲಿ ಮೂರು ಘಟನೆಗಳು ಜರುಗಿದವು. ಅವು ತುಚ್ಛವೆಂದೂ ಪರಸ್ಪರ ಅಸಂಬದ್ಧವೆಂದೂ ತೋರಿದರೂ ಉಲ್ಲೇಖಯೋಗ್ಯವಾಗಿವೆ.

ಒಂದು: ಸ್ಕಾರ್ಲೇಟಿಯ ಅಂಗಡಿಯಲ್ಲಿ ಕೆಲ ದಿನಗಳಿಂದ ಲೆಕ್ಕ ಬರೆಯುತ್ತಲಿದ್ದ ಯುವಕನು ಅಂದು ಅಪರಾಹ್ನದಲ್ಲಿ ಲೆಕ್ಕಪತ್ರ ಮುಗಿಸಿ, ಆಯವ್ಯಯದ ತಾಳೆ ಸಿದ್ಧಪಡಿಸುವುದಕ್ಕಾಗಿ ಅಂಗಡಿಯಿಂದ ಹೊರಟುಹೋದನು.

ಎರಡು: ಅದೇ ಅಪರಾಹ್ನದಲ್ಲಿ ಟಾಮ್ ಮರಿಸ್ ಅಂಗಡಿಯ ವ್ಯವ

ಸ್ಥಾಪಕನಾದ ಟೊರಿನೋವನ್ನು ಕರೆದು "ನಾನು ವಾರಾಂತ್ಯದ ಟಿಕೇಟು ತಕ್ಕೊಂಡು ಕೆಲದಿನ ಪ್ರವಾಸಮಾಡಿ ಬರುತ್ತೇನೆ. ಅವರೆಗೆ ಅಂಗಡಿಯ ಭಾರ ವನ್ನೆಲ್ಲ ನೀನೇ ವಹಿಸಿಕೊಳ್ಳಬೇಕು," ಎಂದು ಹೇಳಿದ.

ವ್ಯವಸ್ಥಾಪಕ ಟೊರಿನೋ ಏಕೋ ಇಡೀ ದಿನ ಚಿಂತಾಕುಲನಾಗಿದ್ದ; ಅವನ ಮನಸಿಗೆ ಸ್ವಲ್ಪವೂ ಶಾಂತಿಯಿರಲಿಲ್ಲ; ಅವನು ಒಳಗೊಳಗೇ ಬಹಳ ಚಡಪಡಿಸುತ್ತಿದ್ದ. ಮನಸಿನ ವ್ಯಾಕುಲವನ್ನು ಬಚ್ಚಿಡುವುದೂ ಅವನಿಗೆ ಅಸಾಧ್ಯವಾಗಿತ್ತು. ಮರಿಸನ ಮಾತನ್ನು ಕೇಳಿದಾಗ ಮಾತ್ರ ಅವನ ಎದೆಯ ಭಾರ ಹಗುರಾಯಿತು. ಅವನು ಸ್ವಲ್ಪ ಸಮಾಧಾನಚಿತ್ತದಿಂದ ಮಾತನಾಡಿದ: "ಹಾಗೇ ಆಗಲಿ. ಅಂಗಡಿ ಮುಚ್ಚುವ ಮೊದಲೇ ಹೋಗುವಿರೇನು?"

"ಹಾಂ, ಗಾಡಿಯ ಹೊತ್ತಾಗಿದೆ. ನಾನು ಸ್ವಲ್ಪ ಮೊದಲೇ ಹೋಗ ಬೇಕು. ಸಂಗಡ ಮಿಸ್ ಹೆಡ್ಲಿಯನ್ನೂ ಕರೆದುಕೊಂಡು ಹೋಗುತ್ತೇನೆ. ಕೆಲಸ ಹೆಚ್ಚಾಗಿ ಇಲ್ಲದಿದ್ದರೆ ಕೆಲಸಗಾರರನ್ನೆಲ್ಲ ಸ್ವಲ್ಪ ಮುಂಚಿತವಾಗಿ ಬಿಟ್ಟರೂ ಬಿಡಬಹುದು. ನನಗೆ ಒಂದೆರಡು ದಿನ ವಿಶ್ರಾಂತಿ ಬೇಕಾಗಿದೆ."

"ಆಗಲಾಗಲಿ, ಏನೂ ಅಡ್ಡಿಯಿಲ್ಲ. ನೀವಿಲ್ಲಿ ಇಲ್ಲದಿದ್ದರೂ ಇಲ್ಲಿಯ ಕೆಲಸಕಾರ್ಯಗಳನ್ನು ಸರಿಯಾಗಿ ನಡೆಸಿಕೊಂಡು ಹೋಗುತ್ತೇನೆ."

ಮತ್ತೆ ಕೆಲ ಹೊತ್ತು ತನ್ನ ಆಫೀಸಿನಲ್ಲಿ ನಿಂತುಕೊಂಡು ಅಂಗಡಿ ವ್ಯವ ಹಾರದ ಬಗ್ಗೆ ನಾಲ್ಕು ಮಾತು ಹೇಳಿದ. ಆಗ ಗಡಿಯಾಳ ಐದು ಗಂಟೆ ಬಾರಿಸಿತು.

ಮೂರು : ಆ ಸಮಯಕ್ಕೆ ಸರಿಯಾಗಿ ವಿದೇಶೀಯ ಮುಖಚರ್ಯೆಯ ಒಂದು ದೀರ್ಘಕಾಯ ವ್ಯಕ್ತಿ ಮರಿಸನ ಅಂಗಡಿಯನ್ನು ಪ್ರವೇಶಿಸಿತು. ಕುಮಾರಿ ಮಾರ್ಜರಿ ಹೆಡ್ಲಿ ಬಾಗಿಲಲ್ಲಿಯೇ ನಿಂತಿದ್ದಳು. ಅವಳು ಆಗಂತುಕ ನನ್ನು ಸ್ವಾಗತಿಸಿ, ಒಂದು ನಿಮಿಷ ಅವನೊಡನೆ ಮಾತನಾಡಿ, ಆಮೇಲೆ ಒಂದು ಕೋಣೆಗೆ ಕರೆದೊಯ್ದಳು. ತತ್ ಕ್ಷಣವೇ ಅವಳು ಹೊರಗೆ ಬಂದು ಕೋಣೆಯ ಬಾಗಿಲಿನ ತೆರೆಯನ್ನೆಳೆದಳು.

ಕೆಲ ನಿಮಿಷಗಳ ತರುವಾಯ ಟೋರಿನೋ ಅಂಗಡಿಯ ಕೆಲಸಗಾರರಿಗೆಲ್ಲ ಒಡೆಯರು ಈಗಲೇ ವೇತನ ಕೊಡುತ್ತಾರೆಂದು ತಿಳಿಸಿದ. ತಾನು ಒಂದು ಅವಸರದ ಪತ್ರವನ್ನು ಅಂಚೆಪೆಟ್ಟಿಗೆಗೆ ಒಗೆದುಬರುತ್ತೇನೆಂದು ಹೇಳಿ ತಲೆಯ

ಮೇಲೆ ಟೊಪ್ಪಿಗೆ ಇಟ್ಟುಕೊಂಡು ಗಡಿಬಿಡಿಯಿಂದ ಹೊರಹೋದ. ಕೆಲಸಗಾರರೆಲ್ಲ ಅಂಗಡಿಯ ಹಿಂಭಾಗದ ಆಫೀಸು ಕೋಣೆಯಲ್ಲಿ ಕುಳಿತರು.

ಅಂದು ಶನಿವಾರ, ಇಳಿಹೊತ್ತು; ಅಂಗಡಿಯಲ್ಲಿ ಕೆಲಸ ಹೆಚ್ಚಿರಲಿಲ್ಲ. ಅಲ್ಲಿ ಕಾದು ಕುಳಿತಿದ್ದ ಮಾರ್ಜರಿ ಹೆಡ್ಲಿ ಸುತ್ತುಮುತ್ತ ಒಮ್ಮೆ ದೃಷ್ಟಿಯಾಡಿಸಿ ಸರಕ್ಕನೆ ಎದ್ದು ಆ ವಿದೇಶಿ ಕುಳಿತಿದ್ದ ಕೋಣೆಯನ್ನು ಪ್ರವೇಶಿಸಿ, "ಎಲ್ಲಿಯೂ ಯಾವ ಆತಂಕವೂ ಇಲ್ಲ" ಎಂದು ಹೇಳಿದಳು.

ಅದನ್ನು ಕೇಳಿ ಕಪ್ಪುಗಡ್ಡದ ಆ ದೀರ್ಘಕಾಯನು ಕೋಣೆಯಿಂದ ಹೊರಬಂದನು. ಅಲ್ಲೊಂದು ಎತ್ತರವಾದ ಶೋಕೇಸಿತ್ತು; ಅವನು ಅದರ ಮೇಲೆ ಹತ್ತಿ ಕುಳಿತನು. ಆ ಕಪಾಟಿನ ಶಿರೋಭಾಗದಲ್ಲಿ ಎತ್ತರವಾದ ಸುತ್ತುಕಟ್ಟಿತ್ತು; ಅದರ ಮರೆಯಲ್ಲಿ ಅವಿತುಕೊಂಡು ಒರಗಿದನು. ಕೆಳಗಿದ್ದವರಿಗೆ ಸ್ವಲ್ಪವೂ ಕಾಣುತ್ತಿರಲಿಲ್ಲ.

ಕುಮಾರಿ ಹೆಡ್ಲಿ ಪುನಃ ಮೊದಲಿನ ಸ್ಥಾನಕ್ಕೆ ಹೋದಳು ಕೆಲಸಗಾರರೆಲ್ಲರೂ ತಮ್ಮ ತಮ್ಮ ವೇತನವನ್ನು ತೆಗೆದುಕೊಂಡು ಅಲ್ಲಿಗೆ ಬಂದರು. ಅಷ್ಟರಲ್ಲಿಯೇ ಟೊರಿನೋವೂ ಮರಳಿಬಂದ; ದೂರದಿಂದ ಓಡಿಬಂದಂತೆ ಅವನು ಏದುತ್ತಿದ್ದ. ಬ್ಲೇಕರು ಛದ್ಮವೇಷದಿಂದ ಕಪಾಟಿನ ಮೇಲೆ ಸುತ್ತುಕಟ್ಟಿನ ಮರೆಯಲ್ಲಿ ಅಡಗಿರುವುದು ಯಾರಿಗೂ ಗೊತ್ತಾಗಲಿಲ್ಲ.

ಕ್ರಮಶಃ ಸಂಜೆಯಾಗಿ ಕತ್ತಲೆ ಮೆಲ್ಲನೆ ಆವರಿಸಿತು. ಬೀದಿಯ ಕಂಬಗಳ ಮೇಲೆ ದೀಪಗಳು ಮೂಡಿದವು. ಸ್ಕಾರ್ಲೆಟಿಯ ಕೆಲಸಗಾರರೆಲ್ಲ ಆಗಲೇ ಹೋಗಿಬಿಟ್ಟಿದ್ದರು. ಮರಿಸನ ಅಭಿಪ್ರಾಯದ ಮೇರೆಗೆ ಟೊರಿನೋ ಅವರನ್ನು ನಿತ್ಯಕ್ಕಿಂತ ಸ್ವಲ್ಪ ಮೊದಲೇ ಬಿಟ್ಟಿದ್ದ; ಏಕೆಂದರೆ ಆಗಲೇ ಹೇಳಿದೆ–ಅಂದು ಅಷ್ಟೊಂದು ಕಾರ್ಯಭಾರವಿರಲಿಲ್ಲ.

ಟೊರಿನೋ ಮಾತ್ರ ಇನ್ನೂ ಅಂಗಡಿಯಲ್ಲೇ ಕಾದುಕುಳಿತಿದ್ದ. ಕಿಡಿಕಿಗಳನ್ನೆಲ್ಲ ಮುಚ್ಚಿದ್ದ. ಆ ಮೇಲೆ ಕುರ್ಚಿಯ ಮೇಲೆ ಕುಳಿತು ಲೆಕ್ಕಮಾಡುತ್ತಲಿದ್ದ. ಕಪಾಟಿನ ಮೇಲೆ ಅವಿತುಕೊಂಡಿದ್ದ ಬ್ಲೇಕ್ ಅದರ ಸುತ್ತುಕಟ್ಟಿನ ಮರೆಯಿಂದ ಟೊರಿನೋವನ್ನು ನೋಡುತ್ತಿದ್ದ. ಎಲ್ಲರೂ ಹೋಗಿಬಿಟ್ಟಿದ್ದಾರೆ, ಅಂಥ ಆಗತ್ಯ ಕೆಲಸವೂ ಇಲ್ಲ, ಟೊರಿನೋ ಮಾತ್ರ ರಾತ್ರಿಯಾದರೂ ಅಂಗಡಿಯಲ್ಲಿಯೇ ಇದ್ದ ಉದ್ದೇಶವೇನೆಂಬುದನ್ನು ತಿಳಿದುಕೊಳ್ಳುವುದು ಬ್ಲೇಕರಿಗೆ

ಕಠಿನವಾಗಲಿಲ್ಲ. ಅವನು ಯಾವುದೋ ಉದ್ದೇಶದಿಂದ ಸುಳ್ಳು ನೆವ ತೋರಿಸಿ ಟೆಲಿಫೋನ್ ಮಾಡಲಿಕ್ಕೆ ಹೋಗಿ ಧಾವಿಸಿಬಂದಿದ್ದನೆಂಬುದನ್ನೂ ಅವರು ತಿಳಿದುಕೊಂಡಿದ್ದರು. ಅವನು ಟೆಲಿಫೋನಿನಲ್ಲಿ ಯಾರಿಗೋ ಮಹತ್ವದ ಸಂಗತಿ ತಿಳಿಸಲು ಹೋಗಿದ್ದ: 'ಕಾರ್ಯಸಿದ್ಧಿಗಾಗಿ ಮಾಡಿದ ಉಪಾಯ ಯೋಜನೆಯನ್ನು–ಸಂಕಟಮಯವಾದ ಆ ಮಾರ್ಗವನ್ನು ಬಿಟ್ಟರೂ ಅಭ್ಯಂತರ ವಿಲ್ಲ; ಸಹಜವಾಗಿಯೇ ಕಾರ್ಯಸಿದ್ಧಿಯಾಗುವುದು, ಎಲ್ಲ ಆತಂಕಗಳು ದೂರಾಗಿವೆ.'

ಕೋಣೆಯಲ್ಲಿ ಗಡಿಯಾಳದ ಶಬ್ದದ ಹೊರತು ಬೇರೆ ಶಬ್ದವಿರಲಿಲ್ಲ. ಹೀಗೆಯೇ ಸಮಯ ಸರಿಯುತ್ತ ಎಂಟು ಗಂಟೆಯಾಯಿತು. ಆಗಲೇ ಅಂಗ ಡಿಯ ಪ್ರವೇಶದ್ವಾರ ಪಟಕ್ಕನೆ ತೆರೆದು ಒಳಗೆ ಇಬ್ಬರ ಪ್ರವೇಶವಾಯಿತು. ಇಬ್ಬರೂ ದೀರ್ಘದೇಹಿಗಳು, ಬಲಿಷ್ಠರು; ಅವರ ಮುಖಚರ್ಯೆ ಷಂಡರಂತೆ. ಇಬ್ಬರೂ ಇಟಾಲಿಯನ್ನರು. ಟೊರಿನೋ ಆಸನದಿಂದೆದ್ದು ಅವರಿಗೆ ಸ್ವಾಗತ ವಿತ್ತ.

ಬಂದವರಲ್ಲೊಬ್ಬನು ಉತ್ಸಾಹದಿಂದ ಮಾತನಾಡಿದ: "ಮೂರ್ಖ ಬ್ರೈಟನಿಗೇ ಹೋಗಲಿ, ಇನ್ನೆಲ್ಲಿಗಾದರೂ ಹೋಗಲಿ, ಅಂಗಡಿ ಬಿಟ್ಟು ಹೋದದ್ದು ಭಲೋ ಮಾಡಿದ. ನಮ್ಮ ದಾರಿ ನಿಷ್ಕಂಟಕವಾಯಿತು. ಅವನು ಹೋಗಿ ತಾನೂ ಉಳಿದುಕೊಂಡ, ವಿಪತ್ತಿಗೀಡಾದೇವೆಂಬ ನಮ್ಮ ಭಯ ವನ್ನೂ ದೂರಮಾಡಿದ. ಇಲ್ಲದಿದ್ದರೆ ಅವನನ್ನು ನಮ್ಮ ಹಾದಿಯಿಂದ ಸರಿಸು ವುದಕ್ಕೆ ಬಹಳ ಕಷ್ಟಪಡಬೇಕಾಗುತ್ತಿತ್ತು."

"ಅವನು ಸತ್ಯವಾಗಿ ಸ್ಥಾನಾಂತರಕ್ಕೆ ಹೋಗಿದ್ದಾನೆಂಬುದು ನಿಮಗೆ ನಿಸ್ಸಂದೇಹವೇ?" ಟೊರಿನೋ ನಗುತ್ತ ಕೇಳಿದ.

"ಹಾಂ. ಅವನು ಸತ್ಯವಾಗಿ ಹೊರಟುಹೋಗಿದ್ದಾನೆ. ಅವನು ಲಂಡನ್ ಬಿಟ್ಟುದನ್ನು ಕಣ್ಣುಟ್ಟಿ ನೋಡಿದ್ದೇವೆ. ಬೇಬಿ ಕಾರಿನಲ್ಲಿ ಹೆಡ್ಲಿ ಸಹಿತವಾಗಿ ಹೋಗಿದ್ದಾನೆ. ಗಾಡಿಯಲ್ಲಿ ಸ್ವಲ್ಪ ಲಗೇಜೂ ಇತ್ತು."

"ಆನಂದದ ಸುದ್ದಿ. ನೀವಿನ್ನು ನಿಮ್ಮ ಅಡ್ಡೆಗೆ ಹೋಗಿರಿ. ದಲದ ಮೊದಲನೆಯ ವ್ಯಕ್ತಿ ಬರುವ ಹೊತ್ತಾಯಿತು."

ಅಷ್ಟರಲ್ಲಿ ಹೊರಗಡೆ ಖಟ್‌ಖಟ್ ಸಪ್ಪಳವಾಯಿತು. ಅದನ್ನು ಕೇಳಿ

ಆಗಂತುಕರಿಬ್ಬರೂ ಕೋಣೆಯ ಹಿಂಭಾಗದಲ್ಲಿ ಅದೃಶ್ಯರಾದರು. ಕೂಡಲೇ ಅಂಗಡಿಯ ಬಾಗಿಲನ್ನು ತೆರೆದುಕೊಂಡು, ಕೈಯಲ್ಲಿ ಸೂಟ್‌ಕೇಸ್ ಹಿಡಿದ ಒಬ್ಬ ಮನುಷ್ಯ ಒಳಗೆ ಬಂದ. ಅವನು ಟೋರಿನೋವಿನೊಡನೆ ನಿಮ್ನ ಸ್ವರ ದಲ್ಲಿ ಏನೋ ಮಾತನಾಡಿ, ಎಡಗೈಯೊಳಗಿನ ಪದಕವನ್ನು ಅವನಿಗೆ ತೋರಿ ಸಿದ. ಅದನ್ನು ನೋಡಿ ಟೋರಿನೋ ಅವನಿಗೆ ಬೇರೊಂದು ಕೋಣೆಯಲ್ಲಿ ಹೋಗುವಂತೆ ಸನ್ನೆಮಾಡಿದ. ಅದೇ ಕುಳಿತುಕೊಳ್ಳುವ ಕೋಣೆ, ಮರಿಸ ನೊಡನೆ ಅವರು ಆಲೋಚನೆ ಮಾಡುತ್ತ ಕುಳಿತಿದ್ದ ಕೋಣೆ. ಆಗಂತುಕನು ಆ ಕೋಣೆಯನ್ನು ಪ್ರವೇಶಿಸಿದ.

ಆಮೇಲೆ ಎರಡು ನಿಮಿಷಗಳು ಕಳೆದಿರಬಹುದು. ಸೂಟ್‌ಕೇಸ್ ಹಿಡಿದ ಇನ್ನೊಬ್ಬರು ಬಂದು, ಟೋರಿನೋವಿನ ಪ್ರಶ್ನೆಗೆ ಪ್ರತಿಯಾಗಿ ಎಡಗೈಯೊಳ ಗಿನ ಸಾಂಕೇತಿಕ ಪದಕವನ್ನು ತೋರಿಸಿ, ಅವನ ಸಂಜ್ಞೆಯಂತೆ ಅದೇ ಕೋಣೆಯನ್ನು ಪ್ರವೇಶಿಸಿದ. ಹೀಗೆ ಸ್ವಲ್ಪ ಸಮಯಾಂತರದಿಂದ ಒಮ್ಮೆ ಒಬ್ಬರು, ಒಮ್ಮೆ ಇಬ್ಬರು, ಒಮ್ಮೊಮ್ಮೆ ಮೂವರು ಅಂಗಡಿಯಲ್ಲಿ ಬಂದು ಯಥಾಕ್ರಮವಾಗಿ ಆ ಕೋಣೆಯನ್ನು ಸೇರಿದರು. ಒಂದು ವೈಶಿಷ್ಟ್ಯವೆಂದರೆ ಬರಿಕೈಯಿಂದ ಯಾರೂ ಬರಲಿಲ್ಲ; ಸೂಟ್‌ಕೇಸೋ ಬ್ಯಾಗೋ ಏನಾದರೂ ಕೈಯಲ್ಲಿರುತ್ತಿತ್ತು.

ಆಶ್ಚರ್ಯದ ಮಾತೆಂದರೆ ಎಷ್ಟು ಜನ ಒಳಗೆ ಹೋದರೂ ಆ ಕೋಣೆ ಯಲ್ಲಿ ಸ್ಥಳಾಭಾವವಾಗಲಿಲ್ಲ; ಮತ್ತು ಒಬ್ಬನೂ ಮರಳಿ ಹೊರಗೆ ಬರಲಿಲ್ಲ. ಹೀಗೆ ಒಳಗೆ ಹೋದವರ ಸಂಖ್ಯೆ ೭೫ ಆಯಿತು. ಆಮೇಲೆ ಕೆಲಹೊತ್ತು ಅಂಗಡಿಯೊಳಗೆ ಯಾರೂ ಬರಲಿಲ್ಲ.

ಜನರನ್ನು ಬರಮಾಡಿಕೊಂಡು ಒಳಗೆ ಸಾಗಿಸಿ ಸಾಗಿಸಿ ಟೋರಿನೋ ದಣಿದುಹೋದ. ಬೇಸರದಿಂದ ಕೈಯೊಳಗಿನ ಗಡಿಯಾಳವನ್ನು ನೋಡಿಕೊಳ್ಳ ತೊಡಗಿದ. ತುಸು ಹೊತ್ತಿನಲ್ಲಿ ಮೊದಲು ಬಂದಿದ್ದ ಇಬ್ಬರು ಇಟಾಲಿಯನ್ನ ರಲ್ಲಿ ಒಬ್ಬನು ಮರಳಿ ಟೋರಿನೋವಿನ ಬಳಿ ಬಂದು ಸುತ್ತಲೂ ಊರ್ಧ್ವ ದೃಷ್ಟಿಯಿಂದ ನೋಡಿದ. ಬಳಿಕ ಟೋರಿನೋಗೆ ಹೇಳಿದ: "ಇನ್ನೊಬ್ಬ ಬಂದ ರಾಯಿತು, ನಿನ್ನ ಕೆಲಸ ಮುಗಿಯಿತು. ಅವನು ಬರುವುದಕ್ಕೆ ವಿಲಂಬ ವಾದರೂ ಕೆಲವೇ ನಿಮಿಷಗಳಲ್ಲಿ ನಿಶ್ಚಯವಾಗಿ ಬರುತ್ತಾನೆ. ಆವರೆಗೆ ನೀನು

ಕಾಯಬೇಕಾಗುವುದು; ಅವನು ಬಂದನೆಂದರೆ ಅವನನ್ನು ಒಳಗೆ ಕಳಿಸುವ ವ್ಯವಸ್ಥೆ ಮಾಡಿ ನೀನು ಅಂಗಡಿ ಮುಚ್ಚಿಕೊಂಡು ಮನೆಗೆ ಹೋಗಬಹುದು. ನಾನಿಲ್ಲಿ ನಿಂತುಕೊಳ್ಳುವುದು ಯುಕ್ತವಲ್ಲ. ರಾತ್ರಿ ಬಹಳವಾಗಿದೆ; ಅಂಗಡಿ ಯಲ್ಲಿ ಇನ್ನೂ ದೀಪ ಉರಿಯುವುದನ್ನು ಕಂಡು ಯಾರಾದರೂ ಕುತೂಹಲ ದಿಂದ ಹಣಿಕಿಕ್ಕುವ ಸಂಭವ. ಯಾರಾದರೂ ನನ್ನನ್ನು ನೋಡಿಬಿಡುವ ಭೀತಿ ನಿನ್ನ ಮಾತು ಬೇರೆ; ನೀನು ಅಂಗಡಿಯ ಅಡಳಿತಗಾರ; ಬಹಳ ರಾತ್ರಿಮಾಡಿ ಅಂಗಡಿಯಿಂದ ಹೊರಟದ್ದನ್ನು ನೋಡಿದರೆ ಬಾಧಕವಿಲ್ಲ; ಅಂಗಡಿಯ ಲೆಕ್ಕ ಪತ್ರ ನೋಡುತ್ತ ಕುಳಿತಿರಬಹುದು, ಆದಕ್ಕೇ ಮನೆಗೆ ಹೋಗಲು ತಡವಾಗಿದೆ ಎಂದು ತಿಳಿಯುತ್ತಾರೆ."

ಟೊರಿನೋ ಬೇಸರದ ದನಿಯಲ್ಲಿ ನುಡಿದ: "ಒಳ್ಳೇದು! ರಾತ್ರಿ ಒಂಬ ತ್ತಾದರೂ ನಾನಿಲ್ಲಿ ಕಾದುಕೊಂಡು ಕೂತಿರುತ್ತೇನೆ ಬರುವುದಕ್ಕೆ ಇಷ್ಟು ವಿಲಂಬ ಏಕೆ ಮಾಡುತ್ತಾನೆ ಅವನು? ವೇಳೆಯ ಬೆಲೆಯೇ ಇಲ್ಲವೇ ಅವನಿಗೆ? ಅಥವಾ ಅವನ ಗಡಿಯಾರವೇ ಕೆಟ್ಟಿದೆಯೋ? ಯಾವಾಗ ಉಂಡಿದ್ದೇನೆ- ಹೊಟ್ಟೆ ಹಸಿದುಹೋಗಿದೆ, ಮನೆಗೆ ಹೋಗಬೇಡವೇ ನಾನು? ಅಥವಾ ರಾತ್ರಿ ಯೆಲ್ಲ ಇಲ್ಲಿಯೇ ಉಪವಾಸ ಕೂತಿರಲೋ? ನೀವು ಮಾತ್ರ ಬಲು ಸ್ಫೂರ್ತಿ ಯಲ್ಲಿದ್ದೀರಿ."

ಇಟಾಲಿಯನ್ ಬಂದ ಮಾರ್ಗದಲ್ಲಿ ತಿರುಗಿಹೋದ. ಟೊರಿನೋ ಅಸ ಹಿಷ್ಣುತೆಯಿಂದ ಮತ್ತೆ ಕೈಗಡಿಯಾರ ನೋಡಿಕೊಳ್ಳುತ್ತ ತನ್ನ ಕುರ್ಚಿಯಲ್ಲಿ ಕುಳಿತ. ಎಲ್ಲೆಡೆಯಲ್ಲಿಯೂ ರಾತ್ರಿಯ ನಿಃಶಬ್ದತೆ ವಿರಾಜಮಾನವಾಗುತ್ತ ಲಿತ್ತು.

ಟೊರಿನೋ ಕುಳಿತಿದ್ದು ಬ್ಲೇಕ್ ಅಡಗಿದ ಶೋಕೇಸಿನ ಕಡೆಗೆ ಬೆನ್ನು ಮಾಡಿ ಬ್ಲೇಕ್ ಮೆಲ್ಲನೆ ತಲೆಯೆತ್ತಿ ನೋಡಿ, ಅವನು ಅಧೀರನಾಗಿ ಗಡಿ ಯಾರದಲ್ಲಿಯೇ ಲಕ್ಷ್ಯವಿಟ್ಟಿರುವುದನ್ನು ಕಂಡರು. ಕೂಡಲೇ ಜೇಬಿನಿಂದ ಒಂದು ಸೀಸೆಯನ್ನೂ ಕೊಂಚ ಅರಳೆಯನ್ನೂ ತೆಗೆದು, ಆ ಔಷಧದ್ರವ್ಯದಿಂದ ಅರಳೆಯನ್ನು ತೋಯಿಸಿದರು. ಮತ್ತು ಶೋಕೇಸಿನ ಮೇಲಿಂದ ಟೊರಿನೋ ವಿನ ಮೇಲೆ ಹುಲಿಯಂತೆ ಹಾರಿದರು.

ಈ ಆಕಲ್ಪಿತ ದಾಳಿಯಿಂದ ಟೊರಿನೋ ಮುಂದಕ್ಕೆ ಮುಗ್ಗರಿಸಿಬಿದ್ದ. ಮರುಕ್ಷಣವೇ ಅವನು ಸಾವರಿಸಿಕೊಂಡು ಕೂಗಿಕೊಳ್ಳುವವ. ಆದರೆ ಅದಕ್ಕೆ

ಅವಕಾಶ ಸಿಕ್ಕಲಿಲ್ಲ. ಅವನು ಬಾಯ್ಬಿಡುವ ಮೊದಲೇ ಬ್ಲೇಕ್ ಕ್ಲೋರೋ ಫಾರ್ಮಿನಲ್ಲಿ ನೆನೆದ ಅರಳೆಯನ್ನು ಅವನ ಮೂಗಿಗೆ ಒತ್ತಿಹಿಡಿದರು. ಕೂಡಲೇ ಅವನು ಅಚೇತನನಾಗಿ ನೆಲಕ್ಕುರುಳಿದ. ಬ್ಲೇಕ್ ಗುಪ್ತಸ್ಥಾನದಲ್ಲಿ ಅಡಗಿ ಮುಂದಿನ ಕಾರ್ಯಪ್ರಣಾಲಿಯ ಬಗ್ಗೆ ಯೋಚಿಸಿದರು. ಭಯಂಕರ ಕಠಿನ ಪರೀಕ್ಷಾಪ್ರಸಂಗ ಎದೆಯ ಮೇಲೇ ಬಂದು ನಿಂತಿದೆ. ಆದರೆ ಅತ್ಯಲ್ಪ ಸಮ ಯದಲ್ಲಿಯೇ ಏನು ಮಾಡಬೇಕೆಂಬುದನ್ನು ನಿರ್ಧರಿಸಿದರು.

ಎಚ್ಚರುದಪ್ಪಿದ ಟೊರಿನೋವಿನ ದೇಹವನ್ನು ಪಕ್ಕದ ಕೋಣೆಗೆ ಎಳೆ ದೊಯ್ದು, ಕೈಕಾಲುಗಳನ್ನು ಕಟ್ಟಿ, ಬಟ್ಟೆಯಿಂದ ಬಾಯಿಬಿಗಿದು ಮೂಲೆಯಲ್ಲಿ ಕೆಡವಿದರು; ಬಳಿಕ ಹೊರಗೆ ಬಂದು ಬಾಗಿಲ ಪರದೆಯನ್ನೆಳೆದರು. ಮತ್ತೆ ಸ್ವಲ್ಪ ಅರಳೆಯನ್ನು ಕ್ಲೋರೋಫಾರ್ಮಿನಲ್ಲಿ ತೊಯ್ಸಿ ಬಚ್ಚಿಟ್ಟುಕೊಂಡು ಕುಳಿತರು.

ಮರುಕ್ಷಣದಲ್ಲಿಯೇ ಒಬ್ಬ ಮನುಷ್ಯನು ಅಂಗಡಿಯಲ್ಲಿ ಪ್ರವೇಶಿಸಿದ. ಎತ್ತರವಾದ, ಎತ್ತರಕ್ಕೆ ತಕ್ಕಂತೆ ದಪ್ಪನಾದ ಸುದೃಢವಾದ ಆಳು. ಅವನ ಮೀಸೆಗಳು ಕಿವಿಗಳ ವರೆಗೂ ಹಬ್ಬಿದ್ದವು. ಈಗ ಬಂದವನಿಗಾಗಿ ಟೊರಿ ನೋವಿನ ಕಾರ್ಯವನ್ನು ಬ್ಲೇಕರೇ ನೋಡಿಕೊಂಡರು. ಬಂದವನು ಎಡಗೈಯ ಲ್ಲಿಯ ಪದಕವನ್ನು ಅವರ ಮುಂದೆ ಹಿಡಿದನು. ಇಲಿನ್ ಕೊಟ್ಟಿದ್ದ ಪದಕ ದಂತಹದೇ ಅದು. ಬ್ಲೇಕ್ ಅದನ್ನು ನೋಡಿಕೊಂಡು ಆ ಮನುಷ್ಯನಿಗೆ ಹಿಂಬದಿಯ ಕೋಣೆಯಲ್ಲಿ ಹೋಗುವಂತೆ ಸೂಚಿಸಿದರು.

ಆದರೆ ಅವನು ಅತ್ತಕಡೆ ಹೊರಳುತ್ತಲೇ ಬ್ಲೇಕ್ ಅವನ ಬೆನ್ನಿಗೆರಗಿ, ಒಂದು ಕೈಯಿಂದ ಕತ್ತನ್ನು ಹಿಡಿದು ಇನ್ನೊಂದು ಕೈಯಿಂದ ಕ್ಲೋರೋ ಫಾರ್ಮಿನ ಅರಳೆಯನ್ನು ಅವನ ಮೂಗಿಗೊತ್ತಿದರು. ಕೂಡಲೆ ಅವನು ಎಚ್ಚರುದಪ್ಪಿ ಬೀಳಲು, ಅವನನ್ನು ಇನ್ನೊಂದು ಕೋಣೆಗೆ ಎಳೆದೊಯ್ದರು, ಆದರೆ ಅವನನ್ನು ಪಿಚಂಡಿ ಬಿಗಿದು ಚೆಲ್ಲದೆ ಒಂದು ಕುರ್ಚಿಯಲ್ಲಿ ಕುಳ್ಳಿರಿಸಿ ದರು; ಕೋಣೆಯ ಬಾಗಿಲ ಪರದೆಯನ್ನೆಳೆದು ಒಂದು ಚಿಕ್ಕ ಮೇಜನ್ನು ಅವನ ಮುಂದಿರಿಸಿದರು; ಛದ್ಮವೇಷದ ಉಪಕರಣಗಳ ಪೆಟ್ಟಿಯನ್ನು ಮೇಜಿನ ಮೇಲಿಟ್ಟು, ಅವನಿಗೆದುರಾಗಿ ಕುರ್ಚಿಹಾಕಿಕೊಂಡು ಕುಳಿತರು.

ವೇಷರಚನೆಯಲ್ಲಿ ಒಳ್ಳೇ ನಿಪುಣಹಸ್ತ ಅವರದು. ಕೆಲವೇ ನಿಮಿಷ

ಗಳಲ್ಲಿ ಬ್ಲೇಕರ ಮುಖ ತದ್ರೂಪ ಆ ಮನುಷ್ಯನ ಮುಖದಂತಾಯಿತು. ಆ ಮನುಷ್ಯನ ಮೀಸೆಗಳು ಕೃತಕವೆಂಬುದನ್ನು ಬ್ಲೇಕ್ ಆಗಲೇ ಕಂಡು ಕೊಂಡಿದ್ದರು. ಅವನು ಫರಾರಿ ಆಸಾಮಿ; ಪೋಲಿಸರನ್ನು ವಂಚಿಸುವುದಕ್ಕಾಗಿ ಕೃತಕ ಮೀಸೆ ಹಚ್ಚಿಕೊಂಡು ತಿರುಗುತ್ತಿದ್ದನು. ಅವನ ಮೀಸೆಗಳನ್ನೇ ಕಿತ್ತು ಕೊಂಡು ಅವರು ಹಚ್ಚಿಕೊಂಡರು. ಬಳಿಕ ಅವನ ಬಾಯನ್ನು ಕಟ್ಟಿ, ಅವನ ಜೇಬಿನಲ್ಲಿಯ ಕಾಗದಪತ್ರಗಳನ್ನು ತೆಗೆದುಕೊಂಡರು. ಒಂದು ಟೇಬಲ್‌ಕ್ಲಾಥಿ ನಿಂದ ಅವನ ದೇಹವನ್ನೆಲ್ಲ ಮುಚ್ಚಿದರು. ಅವನಲ್ಲಿದ್ದ ಕಾಗದಪತ್ರಗಳಿಂದ ಅವನ ಹೆಸರು ಅರಾಕೋ ಎಂದು ಗೊತ್ತಾಯಿತು. ಆ ಕಾಗದಪತ್ರಗಳನ್ನೂ ಆ ಹಿತ್ತಾಳೆ ಪದಕವನ್ನೂ ಜೇಬಿನಲ್ಲಿಟ್ಟುಕೊಂಡು, ಅವನ ಸೂಟ್‌ಕೇಸನ್ನು ತಕ್ಕೊಂಡು ಕೋಣೆಯಿಂದ ಹೊರಗೆ ಬಂದರು.

ಆಮೇಲೆ ಬ್ಲೇಕ್ ಸುತ್ತಲೂ ನೋಡಿ ಅಂಗಡಿಯ ತಲೆಬಾಗಿಲನ್ನಿಕ್ಕಿ ದೀಪವನ್ನಾರಿಸಿ, ಕತ್ತಲೆಯಲ್ಲಿ ಕೈಯಾಡಿಸುತ್ತ ಹಿಂದಿನ ಕೋಣೆಯನ್ನು ಸೇರಿ ದರು. ಆ ಕೋಣೆಯಲ್ಲಿಯೂ ಕತ್ತಲೆ. ಅದರ ಹಿಂಬದಿಯ ಕಿಡಿಕಿ ತೆರೆದಿತ್ತು. ಅದು ಅವರ ಪರಿಚಯದ ಕಿಡಿಕಿ. ಈವರೆಗೆ ಬಂದವರೆಲ್ಲ ಈ ಮಾರ್ಗವಾಗಿ ಎಲ್ಲಿಗೆ ಹೋದರೆಂಬುದೂ ಅವರಿಗೆ ಗೊತ್ತಾಗದಿರಲಿಲ್ಲ. ಬಲಗೈಲಿ ಸೂಟ ಕೇಸನ್ನೂ ಎಡಗೈಲಿ ಪದಕವನ್ನೂ ಹಿಡಿದುಕೊಂಡು ಅವರು ಕಿಡಿಕಿಯನ್ನಡರಿ ಹೊರಗಡೆ ಮುಖಚಾಚಿದರು.

ಕಿಡಿಕಿಯ ಆ ಮಗ್ಗಲು ಕತ್ತಲಲ್ಲಿ ಒಬ್ಬ ಮನುಷ್ಯ ನಿಂತಿದ್ದ. "ಬರುವು ದಕ್ಕೆ ಬಹಳ ತಡವಾಯಿತಲ್ಲ! ನಿಮ್ಮ ಹತ್ತಿರ ಅಭಿಜ್ಞಾನವಿದೆಯೋ ನೋಡುವಾ," ಎಂದು ಗಂಭೀರವಾಗಿ ಕೇಳಿದ.

ಬ್ಲೇಕ್ ಪದಕವನ್ನು ತಿರುಗಿಸಿ ಹಿಡಿದರು. ೨೬ ಅಂಕೆ ಕತ್ತಲಲ್ಲಿ ಮಿಂಚಿತು.

"ಸರಿ. ಹತ್ತಿರವೇ ನಿಚ್ಚಣಿಕೆ ಇವೆ; ಅಂಗಳವನ್ನು ದಾಟುವಾಗ ಇಟ್ಟಿ ಗೆಯ ರಾಶಿಯನ್ನು ಎಡವಿ ಬಿದ್ದೀರಿ; ಹೋಗಿರಿ; ಭಯಂಕರ ಕತ್ತಲೆ!"

ಬ್ಲೇಕ್ ಏಣಿಯಿಂದ ಕೆಳಗಿಳಿದು ಜೋಕೆಯಿಂದ ನಡೆದು ಹೋಟೆಲಿನ ಗೋಡೆಯ ಬಳಿ ತಲುಪಿದರು. ಗೋಡೆಯ ಅಡಿಯಲ್ಲಿ ಮತ್ತೊಬ್ಬ ಮನುಷ್ಯ ನಿಂತಿದ್ದ. ಅಪೇಕ್ಷೆಯಂತೆ ಬ್ಲೇಕ್ ಸಾಂಕೇತಿಕ ಚಿಹ್ನವನ್ನು ಅವನಿಗೆ ತೋರಿಸಿ

ದರು. ಅದನ್ನು ನೋಡಿ ಆ ಮನುಷ್ಯ ಹೇಳಿದ:

"ಈ ಗೋಡೆಗೆ ಹೊಂದಿರುವ ನಿಚ್ಚಣಿಕೆಯಿಂದ ಮೇಲೇರಿ ಹೋಗಿರಿ. ಐದಂತಸ್ತು ದಾಟುವ ವರೆಗೂ ಅಂಥ ಭಯವೇನಿಲ್ಲ; ಆರನೆಯ ಅಂತಸ್ತನ್ನು ತಲುಪಿದ ಮೇಲೆ ಮಾತ್ರ ಜೋಕೆಯಿಂದ ನಡೆಯಿರಿ; ಕಾಲ ಕಡೆಗೆ ದೃಷ್ಟಿ ಯಿರಲಿ; ಅಲ್ಲಿಯ ನೆಲವನ್ನೆಲ್ಲ ಅಗಿದುತೆಗೆದಿದ್ದಾರೆ. ಬರೀ ತೊಲೆ ಜಂತಿಗಳಷ್ಟೇ ಇವೆ. ಆದ್ದರಿಂದ ಜಂತಿಯ ಮೇಲೆಯೇ ಏಳನೆಯ ಅಟ್ಟಕ್ಕೆ ಹೋಗಲು ನಿಚ್ಚಣಿಕೆ ಇಟ್ಟಿದ್ದಾರೆ. ಅದನ್ನು ಹತ್ತುವಾಗ ಕಡ್ಡಿ ಕೆರೆದು ಸುತ್ತುಕಡೆ ನೋಡಿ ಕೊಂಡರೆ ಅಷ್ಟೇನೂ ಕಷ್ಟವಾಗಲಿಕ್ಕಿಲ್ಲ."

"ನನಗೊಂದು ಮೇಣಬತ್ತಿ ಸಿಕ್ಕಬಹುದೆ?" ಬ್ಲೇಕ್ ಕೇಳಿದರು.

"ಇಲ್ಲ; ಎಂಥ ಹುಚ್ಚರು ನೀವು. ಅದರಿಂದ ವಿಪತ್ತಿನ ಭಯವಿದೆ. ಎಲ್ಲ ರಿಗೂ ಗೊತ್ತು ಇದು ಹಾಳು ಮನೆ, ಇಲ್ಲಿ ಯಾರೂ ಇರುವುದಿಲ್ಲ, ಹಾಗೇ ಬಿದ್ದಿ ದೆ ಎಂದು. ಇಲ್ಲೆಲ್ಲಿಯಾದರೂ ದೀಪಗೀಪ ಕಂಡರೆ ಕಾರಣವನ್ನು ಹುಡುಕಲು ಜನರು ಉತ್ಸುಕರಾಗುವರು. ರಾತ್ರಿ ಕಾಯುವುದಕ್ಕೆ ನಮ್ಮ ಜನಗಳನ್ನಿಟ್ಟಿ ದ್ದರೂ ಜನರಲ್ಲಿ ಸಂದೇಹಕ್ಕೆಡೆಕೊಡುವಂಥ ಕೆಲಸ ಮಾಡುವುದು ಥರವಲ್ಲ."

ಅವನ ಮಾತನ್ನು ಪ್ರತಿವಾದಿಸದೆ ಬ್ಲೇಕ್ ನಿಚ್ಚಣಿಕೆಯನ್ನೇರಿ ಗೋಡೆ ಯಲ್ಲಿದ್ದ ದುಂಡನೆಯ ಪೊದರಿನಲ್ಲಿ ಪ್ರವೇಶಿಸಿದರು. ಆಮೇಲೆ ಕಟ್ಟಡದ ಅಂತ ಸ್ತುಗಳನ್ನು ಏರಲಾರಂಭಿಸಿದರು. ಯಾವ ಕಡೆಗೂ ಸದ್ದು ಸುಳಿವಿರಲಿಲ್ಲ. ಸ್ಮಶಾನವತ್ ನಿಃಸ್ತಬ್ಧ. ಅವರ ಉಸಿರಾಟದ ಶಬ್ದ ಅವರಿಗೆ ಸುಸ್ಪಷ್ಟವಾಗಿ ಕೇಳಿಸುತ್ತಿತ್ತು. ಆ ಕಗ್ಗತ್ತಲೆಯಲ್ಲಿ ಮಹಡಿ ಏರುವುದಕ್ಕೆ ಸೋಪಾನದ ಇಬ್ಬ ದಿಯಲ್ಲಿದ್ದ ದೂಳಿಡಿದ ರೇಲಿಂಗೇ ಆಧಾರ; ಕಣ್ಣುಗಳು ನಡೆಯಲಿಲ್ಲ.

ಆ ಮನುಷ್ಯ ಹೇಳಿದಂತೆ ಆರನೆಯ ಮಹಡಿಯ ಛತ್ತನ್ನು ತೆಗೆದುಬಿಟ್ಟಿ ದ್ದರು. ಒಂದು ಬಿಡಿ ಜಂತಿಯ ಮೇಲೆ ಗೋಡೆಗಾನಿಸಿ ಒಂದು ನಿಚ್ಚಣಿಕೆ ಇಟ್ಟಿತ್ತು. ಅವರು ಸೂಟ್‌ಕೇಸನ್ನು ಕಾಲಬಳಿ ಇರಿಸಿ ಕಡ್ಡಿ ಕೊರೆದರು. ಆ ನಿಚ್ಚಣಿಕೆ ಏಳನೆಯ ಅಂತಸ್ತಿನ ವರೆಗೆ ಚಾಚಿದ್ದು ಕಂಡಿತು. ಅದೇ ಬೆಳಕಿ ನಲ್ಲಿ ಅವರು ನಾಲ್ಕೂ ಕಡೆ ನೋಡಿದರು. ಏಣಿಯ ಮೇಲ್ತುದಿಯ ಹತ್ತಿರ ಚೌಕಾದ ಪೊದರಿತ್ತು. ಆ ಪೊದರಿನ ಕೆಳಗಡೆ ಇಳಿಯುವ ಸೋಪಾನ ಶ್ರೇಣಿ ಕಂಡಿತು. ಅವರು ಹಗಲು ಅಲ್ಲಿಗೆ ಬಂದಾಗ ಆ ಏಣಿ ಇರಲಿಲ್ಲ. ಸರದಾರ

ಮಿಸ್ತ್ರಿ ಸ್ವಲ್ಪ ಉಪಹಾರ ಪಡೆದು ಅಲ್ಲಿ ಅದನ್ನು ಇಟ್ಟಿರಬೇಕೆಂದು ಬ್ಲೇಕ್ ತಿಳಿದುಕೊಂಡರು.

ಸೂಟ್‌ಕೇಸನ್ನು ಪುನಃ ಕೈಲಿ ತಕ್ಕೊಂಡು ಬ್ಲೇಕ್ ಜೋಕೆಯಿಂದ ನಿಚ್ಚಣಿಕೆ ಏರಿದರು. ಮೇಲೆ ಹೋಗುತ್ತಲೇ ಯಾರೋ ಅವರನ್ನು ಕೈಹಿಡಿದು ಮೇಲೆಳೆದುಕೊಂಡರು. ಅವರು ಮಹಡಿಯ ನೆಲದ ಮೇಲೆ ಹೋಗಿ ನಿಂತರೂ ಆ ಮನುಷ್ಯ ತನ್ನ ಹಿಡಿತವನ್ನು ಸಡಿಲಿಸದೆ "ನೀವು ಯಾರು?" ಎಂದು ಪ್ರಶ್ನಿಸಿದ.

"ಆರಾಕೋ" ವಿದೇಶೀಯರಂತಹ ಕಂಠಸ್ವರದಲ್ಲಿ ಬ್ಲೇಕ್ ಹೇಳಿದರು. ಅವರ ಎದೆ ನಡುಗುತ್ತಿತ್ತು–ನಾನು ಸಿಕ್ಕಿಬೀಳಲಿಕ್ಕಿಲ್ಲವಷ್ಟೆ!

"ಸಾಂಕೇತಿಕ ಚಿಹ್ನ?"

ಬ್ಲೇಕ್ ಹಿತ್ತಾಳೆಯ ಪದಕವನ್ನು ಅವನ ಕೈಯಲ್ಲಿಟ್ಟರು. ಹೊಳೆಯುವ ಸಂಖ್ಯೆಯನ್ನು ನೋಡಿ ಅವನು "ಸರಿ." ಎಂದು ನುಡಿದು, ಅಂಧಕಾರಪೂರ್ಣವಾದ ಮೊಗಸಾಲೆಯಲ್ಲಿ ಅವರನ್ನು ಕರೆದುಕೊಂಡು ಮುಂದುವರಿದ. ಸ್ವಲ್ಪ ದೂರ ಸಾಗಲು ಪರದೆಯ ಹಿಂದೆ ಮಂದ ಪ್ರಕಾಶ ಕಾಣಿಸಿತು; ಬಹುಜನರ ಅಸ್ಫುಟ ಶಬ್ದಗಳು ಕೇಳಿಸಿದವು. ಆದರೂ ಕೈಹಿಡಿದು ಕರೆದೊಯ್ಯುತ್ತಿದ್ದ ಮಾರ್ಗದರ್ಶಕನು ಅವರ ಕೈಯನ್ನು ಬಿಡಲಿಲ್ಲ.

ನಗರದಿಂದ ಅತೀವ ಎತ್ತರದಲ್ಲಿ, ದುರ್ಗಮವಾದ ದುಷ್ಪ್ರವೇಶ್ಯವಾದ ಹಾಳ್ಮನೆಯ ಏಳನೆಯ ಅಂತಸ್ತಿನಲ್ಲಿ, ಈ ರೀತಿ ತರಲ್ಪಟ್ಟುದರಿಂದ ತಮ್ಮ ಅವಸ್ಥೆ ಅತ್ಯಂತ ಸಂಕಟಾಪನ್ನವಾಗಿದೆಯೆಂದು ಬ್ಲೇಕರಿಗೆನಿಸಿತು. ಅಲ್ಲಿ ಯಾವ ಸಹಾಯವೂ ಒದಗುವ ಆಶೆಯಿರಲಿಲ್ಲ. ಅವರು ಎಲ್ಲ ಪಾರ್ಥಿವ ಸಂಬಂಧಗಳಿಂದ ವಿಚ್ಛಿನ್ನರಾಗಿ ನಿರ್ವಾಸಿತರಾಗಿದ್ದರು. ವಿಪತ್ತೊದಗಿದರೆ ಆತ್ಮರಕ್ಷಣೆಯೇ ಅಸಂಭವ. ಕುತೂಹಲವಶರಾಗಿ ಸ್ವೇಚ್ಛೆಯಿಂದ ಅವರೀ ಸಂಕಟವನ್ನು ವಹಿಸಿದ್ದರು; ಆದರಿಂದ ಉದ್ಧಾರವಾಗುವುದು ಕಲ್ಪನಾತೀತ, ಅಲ್ಲದೆ ಹಿಂದಿರುಗುವುದಕ್ಕೂ ಮಾರ್ಗವಿಲ್ಲ.

ಅವರ ಧಮನಿಗಳಲ್ಲಿ ರಕ್ತದ ವೇಗ ಇಮ್ಮಡಿಸಿತು. ಅವರು ಬಹು ಪ್ರಯತ್ನದಿಂದ ಮನಸ್ಸನ್ನು ಸಾವರಿಸಿಕೊಂಡು ಎದುರಿನ ಬಾಗಿಲ ಪರದೆಯನ್ನು ಸರಿಸಿ ಕೋಣೆಯನ್ನು ಪ್ರವೇಶಿಸಿದೊಡನೆ ಉಜ್ವಲ ಪ್ರಕಾಶದಿಂದ

ಕಣ್ಣುಗಳು ಹುಕ್ಕಿದವು.

ಅವರು ಸುತ್ತಲೂ ನೋಡಿ ಆ ಸುಪ್ರಶಸ್ತ ಹಾಲನ್ನು ಗುರುತಿಸಿದರು. ಅಮೃತಶಿಲಾಮಂಡಿತವಾದ, ವಾತಾಯನವಿರಹಿತವಾದ ಆ ಹಾಲೇ ಇದು–ಯುಬೆನ್‌ಕೇನ್ ಎಂಬವನು ಕೊಂಡದ್ದು. ಹಗಲು ಬಂದಾಗ ಇದರ ಉಪಯೋಗವೇನೆಂಬುದು ಬ್ಲೇಕರಿಗೆ ತಿಳಿದಿರಲಿಲ್ಲ; ಈಗ ಅದು ಗೊತ್ತಾಯಿತು.

೮

ಹಾಲಿನಲ್ಲಿ ಒಂದು ಕಡೆ ದೊಡ್ಡದೊಂದು ಮೇಜು; ಮೇಜಿನ ಮೇಲೆ ಅಸಂಖ್ಯ ಪ್ರಮಾಣದಲ್ಲಿ ಮದ್ಯದ ಸೀಸೆಗಳು, ಖಾದ್ಯಪದಾರ್ಥಗಳು, ತಟ್ಟೆಗಳು. ಅಲ್ಲದೆ ಅಲ್ಲಲ್ಲಿ ಕ್ರಮಗೊಳಿಸಿದ ಅನೇಕ ಚಿಕ್ಕ ಮೇಜುಗಳು, ಖುರ್ಚಿಗಳು, ಕಾಷ್ಠಮಂಚಗಳು. ಬ್ಲೇಕ್ ಈ ಮೊದಲು ಸಂದರ್ಶಿಸಿದಾಗ ಇವೆಲ್ಲ ಅಲ್ಲಿರಲಿಲ್ಲ. ಇದೆಲ್ಲ ಸಿಜಾರೆಯ ಏರ್ಪಾಟೆಂದು ಅವರಿಗೆ ಯಾರೂ ಹೇಳಬೇಕಾಗಿರಲಿಲ್ಲ.

ಹಾಲು ಅನೇಕ ನರನಾರಿಯರಿಂದ ತುಂಬಿತ್ತು. ಆದರೆ ನಾರಿಯರ ಸಂಖ್ಯೆ ಕಡಿಮೆ. ಸ್ತ್ರೀಯರೆಲ್ಲ ರತ್ನಭೂಷಣಾಲಂಕೃತರು; ಮೈಮೇಲೆ ಅಲಂಕಾರಗಳ ಅಂಗಡಿಯನ್ನೇ ಹಚ್ಚಿದ್ದರು. ಬ್ಲೇಕ್ ಕೃತ್ರಿಮ ನಿಬಿಡ ಭ್ರೂಯುಗಳ ಮಧ್ಯದಿಂದ ತೀಕ್ಷ್ಣದೃಷ್ಟಿಯಿಂದ ಕೋಣೆಯನ್ನೆಲ್ಲ ನಿರೀಕ್ಷಿಸಿದರು. ಒಂದು ಕಡೆ ಬ್ಯಾಂಡ್‌ವಾದನ; ಇನ್ನೊಂದು ಕಡೆ ಮದ್ಯದ ಸೀಸೆಯನ್ನು ತೆರೆಯುವ ಶಬ್ದ; ಹಾಲಿನ ತುಂಬ ಹರ್ಷ ಕಲರವ.

ಗೋಡೆಯ ಸಮೀಪದಲ್ಲಿ ಒಂದು ಕಡೆ ಸಿಜಾರೆ ಆಕರ್ಷಕ ರಾತ್ರಿವೇಷದಲ್ಲಿ ನಿಂತಿದ್ದ. ಅವನ ವಿಶಾಲ ವಕ್ಷಸ್ಥಲದಲ್ಲಿ ಇಸ್ತ್ರಿಮಾಡಿದ ಶುಭ್ರ ಶರ್ಟು ಒಪ್ಪುತ್ತಿತ್ತು. ಆ ದೀರ್ಘ-ವಿಶಾಲ ಆಕಾರದ ಮೂರ್ತಿಯನ್ನು ನೋಡಿದರೆ ಈ ಉತ್ಸವದ ಅಧ್ಯಕ್ಷ ಅವನೇ ಎಂದು ಎನಿಸುತ್ತಿತ್ತು.

ಬ್ಲೇಕ್ ಪರಪೆಯನ್ನು ಓರೆಮಾಡಿ ಒಳಗೆ ಪ್ರವೇಶಿಸುತ್ತಲೇ–ಸಿಜಾರೆ ದೂರದಲ್ಲಿದ್ದರೂ ಅವರನ್ನು ನೋಡಿದ.–ಜನಸಂದಣಿಯನ್ನು ಭೇದಿಸಿಕೊಂಡು ಅವನು ಅವರ ಕಡೆ ಬರತೊಡಗಿದ. ಅಲ್ಲಿ ನೆರೆದವರಲ್ಲಿ ಅನೇಕರು ಬ್ಲೇಕರ

ಗೊತ್ತಿನವರು; ಹೆಸರಾದ ಕಳ್ಳರು; ಅವರ ವಿರುದ್ಧವಾಗಿ ಬಂಧನದ ವಾರಂಟುಗಳು ಹೊರಟಿರುವುದನ್ನೂ ಅವರು ಬಲ್ಲರು.

ಸಿಜಾರೆ ಬ್ಲೇಕರೆದುರಿಗೆ ಬಂದು ಗಂಭೀರ ಸ್ವರದಲ್ಲಿ ಸ್ವಾಗತವಿತ್ತ. "ಗುಡ್ ಈವ್ನಿಂಗ್ ಸಿಗ್ನರ್ ಅರಾಕೋ, ನಿನಗೆ ನನ್ನ ಸುಸ್ವಾಗತ" ಎಂದು ತನ್ನ ಗಡುತರವಾದ ಬೆರಳುಗಳನ್ನು ಮುಂದೆ ನೀಡಿದ.

ಅವನ ಅಂತರ್ಭೇದಿಯಾದ ತೀಕ್ಷ್ಣದೃಷ್ಟಿಯಿಂದ ಬ್ಲೇಕ್ ವಿಚಲಿತರಾಗದೆ ಹಸ್ತಾಂದೋಲನವಿತ್ತರು. ತಮ್ಮ ಎದೆಯೊಳಗಿನ ಕಂಪನದ ಸುಳಿವನ್ನು ಮೊಗದ ಮೇಲೆ ಕೊಂಚವೂ ತೋರಗೊಡಲಿಲ್ಲ ಆದರೂ ಒಂದು ಚಿಂತೆ ಅವರ ಮಾನಸಿಕ ಶಾಂತಿಯನ್ನು ಕದಡಿತು ತಾವು ಛದ್ಮವೇಷದಲ್ಲಿದ್ದರೂ ತಮ್ಮನ್ನು ಸಿಜಾರೆ ಗುರುತಿಸಿರಬಹುದೇ? ಅವನ ತೀಕ್ಷ್ಣದೃಷ್ಟಿಪಾತದಿಂದ ಅವರೆಷ್ಟು ಮಾತ್ರವೂ ಕುಗ್ಗದೆ ಪೂರ್ಣದೃಷ್ಟಿಯಿಂದ ಅವನ ಮೋರೆಯನ್ನು ನೋಡುತ್ತಿದ್ದರೂ, ತಮ್ಮ ಛದ್ಮವೇಷದ ಮರ್ಮ ಅವನಿಗೆ ತಿಳಿಯದೆ ಇದ್ದರೂ ಮನಸಿನಲ್ಲಿ ಸ್ವಲ್ಪ ಸಂದೇಹ ಹುಟ್ಟಿರಬಹುದೆಂದು ಅವರಿಗೆನಿಸುತ್ತಿತ್ತು. ಆದರೆ ನಿಜವಾಗಿ ಸಂದೇಹಪಟ್ಟಿದ್ದಾನೆಯೇ ಎಂಬುದು ಅವನ ಮಾತುಗಳಿಂದ ಗೊತ್ತಾಗಲಿಲ್ಲ.

ಸಿಜಾರೆ ಅವರ ಕೈಯನ್ನು ಬಿಟ್ಟು ಮೊದಲಿನಂತೆಯೇ ತೀಕ್ಷ್ಣದೃಷ್ಟಿಯಿಂದ ನೋಡುತ್ತ ಮೆಲ್ಲನೆಮೆಲ್ಲನೆ ಎಂದ: "ತುಚ್ಛ ಆರ್ಥಿಕ ವಿಷಯವನ್ನು ಆದಷ್ಟು ಬೇಗ ಮುಗಿಸಿಕೊಳ್ಳಬೇಕಾಗಿದೆ ಮೊದಲು. ಶೀಘ್ರವೇ ನನ್ನ ಲೆಕ್ಕವನ್ನು ತೀರಿಸುವುದು ಅವಶ್ಯ."

"ನಿಮ್ಮ ಮಾತಿನ ಅರ್ಥವಾಗಲಿಲ್ಲ—ಅದಕ್ಕಾಗಿ ಕ್ಷಮಿಸಬೇಕು." ಬ್ಲೇಕ್ ಅಸ್ಫುಟ ಸ್ವರದಲ್ಲಿ ನುಡಿದರು.

"ವ್ಯವಹಾರಿ ಜನರು ತಮ್ಮ ಕರ್ತವ್ಯವನ್ನು ಅವಶ್ಯವಾಗಿ ಪಾಲಿಸಬೇಕೆಂಬುದು ನನ್ನ ಅಭಿಪ್ರಾಯ. ಆದ್ದರಿಂದ ನನ್ನ ಲಭ್ಯಾಂಶವನ್ನು ಮೊದಲೇ ಪಡೆಯುವ ನಿಯಮ ಇಟ್ಟುಕೊಂಡಿದ್ದೇನೆ. ನನಗೆ ಸಲ್ಲಬೇಕಾದ ಕಪ್ಪವನ್ನು ನೀನು ತಂದಿದ್ದೀಯೆಂದು ನಾನು ನಂಬಿದ್ದೇನೆ, ಅರಾಕೋ." ಎಂದು ಬ್ಲೇಕರ ಮುಂದೆ ಕೈನೀಡಿದ.

ಬ್ಲೇಕ್ ಜೇಬಿನಿಂದ ಕೆಲವು ನೋಟುಗಳನ್ನು ತೆಗೆದು ಜಾಡಿಸುತ್ತ,

"ನನ್ನ ನಂಬುಗೆ–ಹಾಂ, ನಾನು ಹತ್ತು ಪೌಂಡು ಕಪ್ಪ ಕೊಡಬೇಕಾಗುವು ದೆಂದು ಹೇಳಿದ್ದಿರಷ್ಟೆ." ಎಂದರು.

ಅವರ ಮಾತಿಗೆ ಸಿಜಾರೆ ಅವಜ್ಞೆಯಿಂದ ನಕ್ಕು "ಮಿತ್ರಾ, ನೀನು ಬಲ್ಲೆ–ನಾನು ಒಂದೇ ಮಾತಿನ ಮನುಷ್ಯ; ಚೌಕಶಿ ವ್ಯಾಪಾರದ ಅಭ್ಯಾಸ ನನಗಿಲ್ಲ. ನಾನು ಗೊತ್ತುಪಡಿಸಿದ ಕಪ್ಪವನ್ನು ತಕ್ಕೊಳ್ಳುವವ; ಕಡಿಮೆ ಸ್ವೀಕರಿಸುವುದಿಲ್ಲ, ಹೆಚ್ಚೂ ಬೇಡುವುದಿಲ್ಲ ಚೌಕಶಿಯಿಂದ ಲಾಭವಿಲ್ಲ. ಪೇಟೆ ಯಲ್ಲಿ ಮಾಂಸ ಕೊಳ್ಳಲು ಬಂದಿದ್ದೀಯಾ ನೀನು? ಒಂದು ನೂರು ಪೌಂಡು ಕಪ್ಪ ಕೊಡಬೇಕಾಗುವುದೆಂಬುದು ನೀನರಿಯದ ಮಾತಲ್ಲ."

ಎದೆಯ ಬಡಿತವೇ ನಿಲ್ಲುವಂಥ ಮಾತು! ಅವನ ಅಡ್ಡೆಗೆ ಹೋದವರ ಶಿಷ್ಟಾಚಾರವೆಂದು ಸ್ವಲ್ಪ ಕಾಣಿಕೆ ಸಲ್ಲಿಸಬೇಕಾಗುವುದೆಂಬುದೇನೋ ಬ್ಲೇಕ ರಿಗೆ ಗೊತ್ತು; ಹತ್ತು ಪೌಂಡಾದರೆ ಯಥೇಷ್ಟವಾಯಿತೆಂದು ಅವರು ಬಗೆ ದಿದ್ದರು. ಆದರೆ ಆ ದುರ್ದವ್ಯ ಚೋರಾಧಿಪತಿ ನೂರು ಪೌಂಡು ಕೇಳಿಬಿಟ್ಟ! ಇದಕ್ಕಿಂತ ವಿಡಂಬನೆ ಎಂಥದು! ಅವರು ಕ್ಷಣಹೊತ್ತು ಸುಮ್ಮನೆ ನಿಂತು ಗೋಣುಹಾಕುತ್ತ ಉತ್ತರವಿತ್ತರು: "ಇಲ್ಲ ಒಡೆಯರೆ, ನೂರು ಪೌಂಡು ಕೊಡಬೇಕಾಗುವುದೆಂಬುದು ನನಗೆ ಗೊತ್ತಿರಲಿಲ್ಲ; ನಾನು ಆ ಏರ್ಪಾಡಿನಲ್ಲೂ ಬಂದಿಲ್ಲ. ಅಷ್ಟು ನನ್ನಿಂದ ಅಸಾಧ್ಯ."

"ಆದರೆ ನನ್ನ ಮಾತು ತಿರುಗತಕ್ಕದ್ದಲ್ಲ. ನೂರು ಪೌಂಡು ಕೊಟ್ಟರೆ ಕೊಡಬೇಕು, ಇಲ್ಲವೆ ಉತ್ಸವವನ್ನು ಬಿಟ್ಟು ಹೋಗಬೇಕು. ಬೇರೆ ಉಪಾ ಯವೇ ಇಲ್ಲ."

"ಹಾಗೇ ಆಗಲಿ; ನಾನು ಹೋಗಿಬಿಡುತ್ತೇನೆ."

ಬ್ಲೇಕ್ ತತ್‌ಕ್ಷಣ ಉತ್ತರವಿತ್ತರು. ಮೊದಲವರು ಸಿಜಾರೆಯ ಗುಪ್ತ ಸ್ಥಳವನ್ನು ಸಂದರ್ಶಿಸಲು ಉತ್ಸುಕರಾಗಿದ್ದರು; ನಾನಾ ಕೌಶಲ ಸಾಹಸ ಗಳಿಂದ ಅಲ್ಲಿ ಪ್ರವೇಶವನ್ನು ಪಡೆದರು; ಅಲ್ಲಿ ನಡೆಯುವ ಕಾರ್ಯಕಲಾಪ ಗಳನ್ನು ನೋಡಿದುದಾಯಿತು. ತಿರುಗಿ ಹೋಗಲು ಅವರಿಗೇನೂ ಅಡ್ಡಿಯಿರ ಲಿಲ್ಲ; ಆದೇಕೆ, ನಿರ್ವಿಘ್ನವಾಗಿ ಅಲ್ಲಿಂದ ಹೊರಟುಹೋಗಲು ಅವರು ಆತುರ ಪಡುತ್ತಿದ್ದರು. ಸಿಜಾರೆ ಹಾಗೆಂದ ಕೂಡಲೆ ಅವರು ತಿರುಗಿ ಹೊರಡಲು ಉದ್ಯುಕ್ತರಾದರು.

ಆದರೆ ಸಿಜಾರೆ ಹುಚ್ಚನಲ್ಲ. ಅವನ ಮನೋಭಾವವನ್ನರಿತು ಅವರ ಹೆಗಲ ಮೇಲೆ ಕೈಹಾಕಿ "ನಿಲ್ಲು ಗೆಳೆಯಾ, ತಿರುಗಿಹೋಗುವುದು ಅಷ್ಟು ಸಹಜವಲ್ಲ. ಸೋಮವಾರ ಬೆಳಗಿನ ಮುಂಚೆ ಇಲ್ಲಿಂದ ಯಾರೂ ಹೊರಬೀಳು ವಂತಿಲ್ಲ" ಎಂದು ನುಡಿದು, ಎಡಪಕ್ಷಕ್ಕೆ ಹೊರಳಿ ಲುಯಿಗಿನಿಗೆ ಕಣ್ಸನ್ನೆ ಮಾಡಿದ. ತತ್ಕ್ಷಣವೇ ಅವನು ಬಾಗಿಲ ಹತ್ತಿರ ಹೋಗಿ ಅವರ ದಾರಿ ಕಟ್ಟಿದ.

ಸ್ವಲ್ಪ ಸಮಯ ಮೌನವಾಗಿದ್ದು ಸಿಜಾರೆ ಹೇಳಿದ: "ನೀನು ನಿರ್ದಿಷ್ಟ ಕಪ್ಪ ಕೊಡಬೇಕು; ಇಲ್ಲದಿದ್ದರೆ ನನ್ನ ಅನುಚರರು ನಿನ್ನ ಭಾರ ವಹಿಸಿಕೊಳ್ಳು ವರು ನನಗೆನಿಸುತ್ತದೆ, ನಾವು ಅತಿಥಿಸತ್ಕಾರಕ್ಕಾಗಿ ಕೊಡುವ ಮದ್ಯದ ಸವಿ ಗಿಂತ ಮದ್ಯದ ಸೀಸೆಗಳ ಗುಂಡುಗಳ ಸವಿಯೇ ನಿನಗೆ ಹೆಚ್ಚಾಗಿ ಸೇರುತ್ತಿರ ಬಹುದು"

ಅವರ ಮನೋಭಾವ ಬ್ಲೇಕರಿಗೆ ತಿಳಿಯದಿರಲಿಲ್ಲ. ಆದರೆ ಒಂದೇ ಮಾತಿಗೆ ಕಳ್ಳನಿಗೆ ನೂರು ಪೌಂಡು ಕೊಡುವುದೆಂದರೆ?

ಅಸಾಧಾರಣ ಧೂರ್ತ ಸಿಜಾರೆ. ಬ್ಲೇಕರಿಂದ ಹಣವನ್ನು ಉಚ್ಚುವು ದಕ್ಕಾಗಿ ಬೇರೆ ದಾರಿ ಅವಲಂಬಿಸುವುದು ಒಳ್ಳೆಯದೆಂದು ಅವನು ಬಗೆದ. ಧ್ವನಿಯನ್ನು ಸ್ವಲ್ಪ ಮೃದುಗೊಳಿಸಿ ಮಾತನಾಡಿದ: "ನೋಡು ಸಿಗ್ನರ್, ತುಂಟನ ಹಾಗೆ ಮಾಡಬೇಡ, ಅದರಿಂದ ಲಾಭವಿಲ್ಲ, ಹಾನಿಯೆ. ನಾನೇನೂ ಅಸಂಗತ ಹೇಳಿಲ್ಲ ನೀನಿಲ್ಲಿ ಪಡೆಯುವುದಕ್ಕೆ ವಿನಿಮಯವಾಗಿ ನೂರು ಪೌಂಡು ಕಪ್ಪ ಅಪವ್ಯಯವೆ?"

"ಅಲ್ಲ, ಅಪವ್ಯಯವೆಂದು ಹೇಗೆ ಹೇಳಲಿ? ಅಪವ್ಯಯವಲ್ಲದಿದ್ದರೂ ಒಂದು ನೂರು ಪೌಂಡು—ಕಡಿಮೆಯೇ?"

"ನಾನು ಒಪ್ಪುತ್ತೇನೆ; ಅಷ್ಟು ದುಡ್ಡು ಕಡಿಮೆಯಲ್ಲ. ಆದರೆ ಇಂತಹ ಸಂಕಟಜನಕ ರಾತ್ರಿಯಲ್ಲಿ ಕಡಿಮೆ ಹಣದಲ್ಲಿ ಇಂತಹ ನಿರಾಪದ ಆಶ್ರಯ ಎಲ್ಲಿ ದೊರೆಯುತ್ತಿತ್ತು? ಅಲ್ಲದೆ ಇಲ್ಲಿ ಮಾಡಿದ ಅತಿಥಿಸತ್ಕಾರದ ಏರ್ಪಾಡನ್ನೂ ನೋಡುತ್ತಿದ್ದೀ. ಎಲ್ಲ ರಾಜಠೀವಿ. ನೀರಿನಂತೆ ವೆಚ್ಚವಾಗುತ್ತಿದೆ ಹಣ. ಈ ಹಣ ಬರುತ್ತದೆಲ್ಲಿಂದ? ಒಂದು ತರ್ಕ ಹೂಡಬಹುದು: ಫಾರ್ಮುರ್ ತುಂಬು ವಾಗ ಏನಾದರೊಂದು ಸುಳ್ಳು ಹೆಸರು ಬರೆದರಾಗಬಹುದೆಂದು. ಆದರೆ

ವಿಚಾರಮಾಡು ಪೋಲಿಸರು ಯಾರನ್ನು ಬಂಧಿಸಲು ಹುಡುಕುತ್ತಿರುವರೋ ಅವರು ಕಲ್ಪಿತನಾಮ ಇಟ್ಟುಕೊಂಡರೂ ವಿಪತ್ತಿನ ಭಯ ಕಡಿಮೆ ಇರುವುದೆ?"

"ಅದೇನೋ ನಿಜ."

"ಇಲ್ಲಿ ಇಷ್ಟೆಲ್ಲ ಜನ ಸೇರಿದ್ದಾರೆ; ನನ್ನನ್ನು ಯಥಾಯೋಗ್ಯವಾಗಿ ಸನ್ಮಾನಿಸಿದ್ದಾರೆ; ನನ್ನ ಆತಿಥ್ಯವನ್ನು ಸ್ವೀಕರಿಸಿ ತೃಪ್ತಿಪಡುತ್ತಿದ್ದಾರೆ; ಇವರೆಲ್ಲರೂ ಮೂರ್ಖರಲ್ಲ. ರಾತ್ರಿಯನ್ನು ಕಳೆಯಲು ಬೇರೆ ಕಡೆ ಅನುಕೂಲ ವಾಗುವುದಿಲ್ಲವೆಂಬುದು ಅವರಿಗೆ ಗೊತ್ತುಂಟು. ಒಂದು ವೇಳೆ ಯಾವನೊಬ್ಬ ಸದ್ಗೃಹಸ್ಥ—ಪೋಲಿಸರು ಅವನ ಮಾನವನ್ನು ಲೆಕ್ಕಿಸದೆ ಫರಾರಿ ಆಸಾಮಿ ಎಂದು ಸಂಬೋಧಿಸುತ್ತಾರೆ—ಯಾವುದೊಂದು ನೆರೆಮನೆಯಲ್ಲಿ ಆಶ್ರಯ ಹೊಂದಿ ಜನಗಣನೆಯಲ್ಲಿ ಅಸತ್ಯ ನಾಮ—ಪರಿಚಯ ಬರೆಸುವ ಏರ್ಪಾಟು ಮಾಡಿದನೆನ್ನೋಣ. ಅದಕ್ಕಾಗಿ ಆತನು ಆ ನೆರಮನೆಯ ಗೃಹಸ್ಥನಿಗೆ ಆತ್ಮ ಸಮರ್ಪಣೆ ಮಾಡಬೇಕಾಗುವುದು. ಗೃಹಸ್ಥನು ಸುಳ್ಳು ಬರೆದಿದ್ದಾನೆಂದಾ ಗಲಿ, ವಿಷಯ ಬಚ್ಚಿಟ್ಟನೆಂದಾಗಲಿ ಗೊತ್ತಾದರೆ, ಅವನು ಬಹಳ ದಂಡ ತೆರ ಬೇಕಾಗುವುದು. ಇಂಥ ಪರಿಸ್ಥಿತಿಯಲ್ಲಿ ಯಾವನೊಬ್ಬ ಗೃಹಸ್ಥನನ್ನು ಇಷ್ಟು ಗುರುತರವಾದ ಜವಾಬ್ದಾರಿ ಹೊರಲು ಒಪ್ಪಿಸುವುದೂ ಸಹಜವಲ್ಲ. ಇದು ಗೃಹಸ್ಥನಿಗೂ ಆಶ್ರಿತನಿಗೂ ಇಬ್ಬರಿಗೂ ಅಪಾಯಕರ ಮಾರ್ಗ. ಆದರೆ ನನ್ನ ಆಶ್ರಯದಲ್ಲಿದ್ದವರಿಗೆ ಅಂಥ ಭಯವೆಲ್ಲಿದೆ?"

"ಆದರೆ ನೀವು ಹೇಗೆ ಹೇಳುವಿರಿ—ಪೋಲಿಸರು ಈ ವ್ಯಾಪಾರದಲ್ಲಿ ಹಸ್ತಕ್ಷೇಪ ಮಾಡಿ—"

"ನನಗೆ ಗೊತ್ತಿದೆ—ಜನಗಣನಾಧಿಕಾರಿಗಳಿಗೆ ಸಹಾಯ ಮಾಡ ಬೇಕೆಂದು ಪೋಲಿಸರಿಗೆ ಮೇಲಿನವರ ಅಪ್ಪಣೆಯಾಗಿದೆ; ಅವರು ಪೂರ್ಣ ಪರಾಮರ್ಶೆಯಿಂದ ಕೆಲಸ ಮಾಡುವರು. ಆದ್ದರಿಂದಲೇ ನನ್ನ ಮಿತ್ರರು ಇಲ್ಲಿ ಆಶ್ರಯ ಪಡೆದು ನಿಶ್ಚಿಂತರಾಗಿದ್ದಾರೆ. ಅವರ ಸರ್ವರಕ್ಷಣೆಯ ಭಾರವನ್ನು ನಾನು ವಹಿಸಿಕೊಂಡಿದ್ದೇನೆ. ಹೀಗಿರಲು ನಿರ್ದಿಷ್ಟ ಕಪ್ಪವನ್ನು ಕೊಡಲೊಲ್ಲದೆ ನೀನೇಕೆ ಸಂಕಟವನ್ನು ಮೈಮೇಲೆ ತಂದುಕೊಳ್ಳುತ್ತೀ? ಹಣ ಹೆಚ್ಚು ನಿಜ; ಆದರೆ ನನ್ನ ದಾಯಿತ್ವವೇನೂ ಕಡಿಮೆಯದಲ್ಲ. ಖಂಡಿತ, ಇಲ್ಲ ಯಾವ ಆಪತ್ತೂ ಇಲ್ಲ ನಿನಗೆ."

ಇಂಥ ಸಂಕಟ ಸಮಯಗಳಲ್ಲಿ ಎಷ್ಟೋ ಸಲ ಬಹಳ ಹಣ ಬಿಚ್ಚ ಬೇಕಾಗುವುದೆಂಬುದು ಬ್ಲೇಕರಿಗೆ ಗೊತ್ತೇ. ಅದ್ದರಿಂದ ಅಪರಿಚಿತ ಸ್ಥಾನಕ್ಕೆ ಸಂಕಟಮಯ ಪರಿಸ್ಥಿತಿಯನ್ನು ಎದುರಿಸಲು ಹೋಗುವಾಗ ಅವರು ಗುಪ್ತ ಜೇಬಿನಲ್ಲಿ ಸಾಕಷ್ಟು ಹಣ ಇಟ್ಟಿರುತ್ತಿದ್ದರು; ಇಂದೂ ಇಟ್ಟಿದ್ದರು. ಸಿಜಾರೆ ಯೊಡನೆ ಹೆಚ್ಚಾಗಿ ವಾದವನ್ನು ಬೆಳಿಸದೆ ನೂರು ಪೌಂಡು ಬೆಲೆಯ ನೋಟು ಗಳನ್ನು ತೆಗೆದು ಅವನ ಕೈಯಲ್ಲಿಟ್ಟರು. ಅವನು ಹಿಡಿಯಲ್ಪಟ್ಟರೆ ಈ ಹಣ ವನ್ನು ತಿರುಗಿ ಪಡೆಯಲು ಬಂದೀತೆಂದು ಅವರು ಮನಸಿನಲ್ಲಿ ಎಂದು ಕೊಂಡರು.

ಸಿಜಾರೆ ಹಣವನ್ನು ಎಣಿಸಿಕೊಂಡು ತೃಪ್ತನಾಗಿ ಅಲ್ಲಿಂದ ಹೊರಟು ಹೋದನು.

ಬ್ಲೇಕ್ ತಿಳಿದುಕೊಂಡರು: ಯುಬೆನ್‌ಕೇನ್ ಸಿಜಾರೆಯ ಏಜಂಟ್ ಮಾತ್ರ; ಧನಸಂಪಾದನೆಯ ಉದ್ದೇಶದಿಂದ ಅವನು ಈ ತಸ್ಕರ ಪಡೆಗೆ ಸ್ಥಳ ಸಹಾಯಮಾಡಿದ್ದನು. ಜನಗಣನೆಗಾಗಿ ಅಧಿಕಾರಿಗಳು ಎಲ್ಲ ಕಡೆಗಳಲ್ಲೂ ಹೋಗುವರು ನಿಜ. ಆದರೆ ಹಾಳುಬಿದ್ದ ಹೋಟಲಿನ ನಿಭೃತಭಾಗವೊಂದ ರಲ್ಲಿ, ನಿರ್ಜನ ಗೃಹದ ದುರ್ಗಮವಾದ ಕೋಣೆಯೊಂದರಲ್ಲಿ ಚೋರತಸ್ಕರರು ಅಡಗಿದ್ದಾರೆಂದು ಅವರಿಗೆಂತು ತಿಳಿಯಬೇಕು? ಸ್ಕಾರ್ಲೇಟಿಯ ಅಂಗಡಿ ಯನ್ನು ಹಿಡಿಯಲು ಸಿಜಾರೆ ಅಷ್ಟೇಕೆ ವ್ಯಾಕುಲನಾಗಿದ್ದನೆಂಬುದೂ ಬ್ಲೇಕರಿಗೆ ಸ್ಪಷ್ಟವಾಯಿತು. ಈ ಬಿದ್ದ ಮನೆಗೆ, ಕಲ್ಲು ಕಟ್ಟೆಗೆ ದಾಟಿಕೊಂಡು ಇಷ್ಟೊಂದು ಜನರು ರಾಜಪಥದಿಂದ ನೇರವಾಗಿ ಬರುವುದು ಅನಿಷ್ಟಕಾರಿಯೇ ಸರಿ. ಅದಕ್ಕಾಗಿ ಸಿಜಾರೆ ಆ ಅಂಗಡಿಯೊಳಗಿಂದ ಹಿಂದಿನ ಕಿಡಿಕಿಯ ಮಾರ್ಗ ವಾಗಿ ಬರುವುದೇ ನಿಸ್ಸಂದೇಹ ಸುರಕ್ಷಿತವೆಂದು ಅವನ ಯೋಚನೆ. ಅವನ ಇಂಗಿತವನ್ನರಿತೇ ಬ್ಲೇಕರು ಸ್ಕಾರ್ಲೇಟಿಯ ಅಂಗಡಿಯ ಮಾರ್ಗವನ್ನು ಅವನಿ ಗಾಗಿ ಅಬಾಧಿತಗೊಳಿಸುವ ಯೋಜನೆ ಮಾಡಿದ್ದರು. ಅವರ ಹೇಳಿಕೆಯಂತೆ ಮರಿಸ್ ಸರಿಯಾಗಿ ಏರ್ಪಾಡು ಮಾಡಿದ್ದ.

ದೇಶದ ಪ್ರಖ್ಯಾತ ಕಳ್ಳರು, ತಲೆತಪ್ಪಿಸಿಕೊಂಡಿದ್ದ ಅಸಾಮಿಗಳು, ವಿದೇಶದಿಂದ ಓಡಿಬಂದ ತಸ್ಕರರು, ಹೀಗೆ ಅನೇಕ ಜನ ಸಿಜಾರೆಯ ಕೃಪಾ ಛತ್ರದಡಿಯಲ್ಲಿ ಸೇರಿದ್ದರು. ಜನಗಣನೆ ತಪ್ಪಿಸಿಕೊಳ್ಳುವುದಕ್ಕೆ ಇದೇ

ಏಕಮಾತ್ರ ಉಪಾಯವಾಗಿತ್ತವರಿಗೆ. ಸಿಜಾರೆ ಅವರಿಂದ ಅತ್ಯಧಿಕವಾಗಿ ಹಣ ಸೆಳೆದುಕೊಂಡಿದ್ದರೂ–ಖರ್ಚೂ ವಿಪರೀತವಿತ್ತು–ದ್ರವ್ಯಾರ್ಜನೆಯೊಂದೇ ಅವನ ಉದ್ದೇಶವಿರಲಿಲ್ಲ. ಅವರೆಲ್ಲರ ಮೇಲೆ ತನ್ನ ಶಕ್ತಿಯುಕ್ತಿಗಳ ಪ್ರಭಾವ ಬೀರಿ, ದೇಶದ ಎಲ್ಲ ಚೋರ ಸಂಘಗಳ ಮೇಲೆ ಅಧಿಕಾರವನ್ನು ಸ್ಥಾಪಿಸ ಬೇಕೆಂಬುದೇ ಅವನ ಮಹತ್ವಾಕಾಂಕ್ಷೆ. ಅವರೆಲ್ಲರ ಸಹಾಯ ಸಾಧ್ಯವಾದರೆ ಭವಿಷ್ಯತ್ತಿನಲ್ಲಿ ಅಸಾಧ್ಯಕೃತ್ಯಗಳನ್ನೆಸಗೇನೆಂಬ ಆಸೆಯೂ ಅವನಿಗಿತ್ತು. ಈ ಗುಪ್ತಸ್ಥಾನ ಸ್ಕಾಟ್ಲೆಂಡ್ ಯಾರ್ಡಿಗೆ ಗೊತ್ತಾದರೆ, ಇವರೆಲ್ಲರನ್ನೂ ಒಂದೇಟಿಗೆ ಮುತ್ತಿ ಹಿಡಿದುಬಿಟ್ಟರೆ–ಇದು ಬ್ಲೇಕರ ರೇರಾಜ್ಯದ ಕನಸು ಮಾತ್ರ. ಹೀಗಾಗುವ ಸಂಭವವೇ ಇರಲಿಲ್ಲ.

ಬ್ಲೇಕ್ ಸುತ್ತಲೂ ನೋಡಿದರು. ದಸ್ಯುಗಳೆಲ್ಲ ತಮತಮಗೆ ಬೇಕಾದ ಮದ್ಯವನ್ನು ಯಥೇಚ್ಛವಾಗಿ ಸೇವಿಸಿ ಅಮಲೇರಿ ವೈಯರೆತಿದ್ದರು. ಬ್ಯಾಂಡಿನಲ್ಲಿ ನೃತ್ಯದ ವಾದನ ಆರಂಭವಾಗಿತ್ತು. ಎಲ್ಲರೂ ಗುಂಪುಗುಂಪಾಗಿ ನೃತ್ಯದಲ್ಲಿ ತೊಡಗಿದರು. ಬ್ಲೇಕ್ ಮೆಲ್ಲನೆ ಅವರೊಳಗಿಂದ ನುಸುಳಿಕೊಂಡು ಬಾಗಿಲ ಪರದೆಯನ್ನು ಸರಿಸಿ ಹೊರಗೆ ಬಂದರು. ತಾವು ಏರಿಬಂದಿದ್ದ ನಿಚ್ಚಣಿಕೆಯನ್ನು ಕತ್ತಲಲ್ಲಿ ಹುಡುಕಿಕೊಂಡುಹೋದರು. ನಿರ್ದಿಷ್ಟ ಸ್ಥಳದಲ್ಲಿ ಕೈಯಾಡಿಸಿ ನೋಡಿದರು. ಅದು ಅಲ್ಲಿರಲಿಲ್ಲ. ಅದು ಹತ್ತಿಬರುವುದಕ್ಕಾಗಿ ಮಾತ್ರ ಇಟ್ಟದ್ದು. ಬೇಕಾದವರು ಬೇಕಾದಾಗ ತಿರುಗಿ ಹೋಗುವುದಕ್ಕಾಗಿ ಅಲ್ಲ. ತಿರುಗಿ ಹೋಗಲು ಒಡೆಯನ ಅಪ್ಪಣೆಯಾದಾಗ ಪುನಃ ಅದು ಅಲ್ಲಿ ಸ್ಥಾಪಿತವಾಗಬಹುದು.

ಮುಂದೇನು ಮಾಡಬೇಕೆಂದು ಬ್ಲೇಕ್ ಯೋಚಿಸಿದರು ಸ್ವಲ್ಪ ಹೊತ್ತು. ಏನೂ ತೋಚದೆ ಮತ್ತೆ ಒಳಗೆ ಹೊರಟರು. ಇಳಿದು ಹೋಗುವುದಕ್ಕಾಗಿ ಮತ್ತೆಲ್ಲಿಯಾದರೂ ಹಾದಿಯಿದೆಯೇ ಎಂದು ನೋಡಿದರು. ಆದರೆ ಎಲ್ಲಿಯೂ ನಿಚ್ಚಣಿಕೆಯಾಗಲಿ, ಇಳಿಯಬಹುದಾದಂಥ ಬೇರೆ ಅನುಕೂಲ್ಯವಾಗಲಿ ಇರಲಿಲ್ಲ. ಅವರು ಕಡ್ಡಿ ಕೆರೆದು ನೋಡಿದರು. ಕೆಳಗಿನ ಅಂತಸ್ತಿನ ತಳ ಬಹುದೂರ; ಅದೂ ಬರಿ ತೊಲೆ ಜಂತಿಗಳು. ಜಿಗಿದರೆ ಬದುಕುವ ಆಸೆಯೇ ಇಲ್ಲ. ಬ್ಲೇಕ್ ಮರಳಿ ಹಾಲಿನೊಳಗೆ ಹೋದರು.

ಆಗ ಮದ್ಯದ ಅಮಲು ಪೂರಾ ತಲೆಗೇರಿದ ಅತಿಥಿಗಳ ನೃತ್ಯ

ಬಯ್ದಾಟ ಜಗಳಾಟಗಳಲ್ಲಿ ಪರಿವರ್ತಿತವಾಗಿತ್ತು. ಜಗಳಾಟದಲ್ಲಿ ಹೊಡೆದಾಟವೂ ಆಗುತ್ತಿತ್ತು. ಬ್ಲೇಕ್ ಅವರೊಳಗೆ ಸೇರಿ ಸುಳಿದಾಡುತ್ತ ಇನ್ನೊಂದು ಕೋಣೆಯ ಬಾಗಿಲಿಗೆ ಬಂದರು. ಒಳಗಿನಿಂದ ಗಾಯನವಾದನ ಕೇಳಿಸಿತು. ಅವರು ನಿಃಶಬ್ದವಾಗಿ ಒಳಗೆ ಹೊಕ್ಕರು. ಅಲ್ಲಿಬ್ಬರು ಯುವಕ ಯುವತಿಯರು ದೃಢಾಲಿಂಗನಬದ್ಧರಾಗಿ, ಗ್ರಾಮೋಫೋನಿನ ಗಾನದ ತಾಳಾನುಸಾರವಾಗಿ ನರ್ತಿಸುತ್ತಿದ್ದರು. ಅವರು ಲುಯಿಗಿನಿ ಮತ್ತು ಸಿಯಾರಾ. ಕೆಲಹೊತ್ತು ಅವರ ಕುಣಿತವನ್ನು ನೋಡುತ್ತ ನಿಂತರು ಬ್ಲೇಕ್.

ಇಬ್ಬರೂ ನೃತ್ಯದಲ್ಲಿ ತನ್ಮಯರಾಗಿ ಆನಂದಭೋಗದಲ್ಲಿ ಮೈಮರೆತಿದ್ದರು. ಯಾರು ಬಂದರೂ ಅವರಿಗೆ ಲಕ್ಷ್ಯವಿಲ್ಲ. ತುಸು ಹೊತ್ತಿನಲ್ಲಿಯೇ ಆ ಕೋಣೆಯ ಇನ್ನೊಂದು ಬಾಗಿಲಿಂದ ಸಿಜಾರೆ ಪ್ರವೇಶಿಸಿದ. ಅದೂ ಅವರಿಗೆ ಎಚ್ಚರವಿಲ್ಲ. ಲುಯಿಗಿನಿ ಸಿಯಾರಾನೊಡನೆ ಎಗ್ಗಿಲ್ಲದೆ ಕುಣಿಯುತ್ತಿದ್ದಾನೆ! ಸಿಜಾರೆಯ ಮೈಯೆಲ್ಲ ಉರಿಯಿತು. ಅವನು ಸಿಟ್ಟಿನಿಂದ ಗ್ರಾಮೊಫೋನಿನ ರೆಕಾರ್ಡುಗಳನ್ನು ಮೆಟ್ಟಿ ಒಡೆದನು; ಗ್ರಾಮೊಫೋನನ್ನು ಎತ್ತಿ ಒಗೆದು ತುಂಡು ತುಂಡು ಮಾಡಿದನು. ಇಷ್ಟು ರಾದ್ಧಾಂತವಾದ ಮೇಲೆ ತರುಣ ತರುಣಿಯರು ಎಚ್ಚತ್ತರು. ಅವರ ಕುಣಿತ ನಿಂತಿತು. ಎದುರಿಗೆ ಸಿಜಾರೆಯ ಭೀಷಣ ಮೂರ್ತಿ! ನೋಡಿ ಸಿಯಾರಾ ಬೆದರಿದಳು; ದಿಕ್ಕುತೋಚದಾಗಿ ಲುಯಿಗಿನಿಯ ಹಿಂದೆ ಅಡಗಿದಳು; ಅವಳ ಮೈ ನಡುಗುತ್ತಿತ್ತು.

ಕ್ರೋಧಸಂತಪ್ತನಾದ ಸಿಜಾರೆ ಸಿಯಾರಾನನ್ನು ಕತ್ತು ಹಿಡಿದು ಗೋಡೆಗೆ ತಳ್ಳಿ, ಲುಯಿಗಿನಿಯನ್ನು ಕುರಿತು ಗರ್ಜಿಸಿದ: "ಲುಯಿಗಿನಿ, ನಿನ್ನ ಉದ್ಧತತನ ಮಿತಿಮೀರಿತು; ಇದು ಅಸಹನೀಯ! ಅತ್ಯಂತ ಮೂಢತನದ ಕೆಲಸ ಇದು. ತಿಳಿಯಿತೆ?"

ಕ್ರೋಧದಿಂದ ಲುಯಿಗಿನಿಯ ಕಣ್ಣುಗಳೂ ಕೆಂಪೇರಿದವು. "ನನ್ನ ಉದ್ಧಟತನ? ಓಡಿಬಂದು ಹೀಗೆ ನನ್ನನ್ನು ತಿರಸ್ಕರಿಸಲು ನೀನು ಯಾರು?" ಉತ್ತೇಜಿತ ಸ್ವರದಲ್ಲಿ ಎಂದ.

"ನೀನು ನನಗೆ ಎದುರಾಡಬೇಡ; ನನ್ನ ಭೃತ್ಯ ನನ್ನ ಮಾತಿನಂತೆ ನಡೆಯಬೇಕು! ಇನ್ನೆಂದೂ ನೀನವಳನ್ನು ಮುಟ್ಟಕೂಡದು, ತಿಳಿಯಿತೆ?"

"ಇಲ್ಲ, ತಿಳಿಯಲಿಲ್ಲ; ಏಕೆ ಮುಟ್ಟಬಾರದು?"

"ಅವಳು ನಿನ್ನ ಸ್ಪರ್ಶಕ್ಕೆ ತಕ್ಕವಳಲ್ಲ; ಅವಳು ಕೃಷ್ಣವರ್ಣೆ! ಅವಳ ಮೈಬಣ್ಣ ಬಿಳಿದಾದರೂ, ಅವಳ ತಂದೆ ಸ್ವಿಡನ್ನಿನ ಒಬ್ಬ ಕೌಂಟನಾದರೂ ಅವಳ ತಾಯಿ ಫಿರಂಗಿ! ಐದು ತಲೆಮಾರು ಹಿಂದೆ ಅವಳ ಪೂರ್ವಜರು ಹಸಿ ಮಾಂಸ ತಿಂದು ಮರಗಳ ಪೊಟರೆಯೊಳಗೆ ಇರುತ್ತಿದ್ದರು!"

ಅಪಮಾನದಿಂದ ಉರಿಪೆದ್ದ ಸಿಯಾರಾ ಹೆಬ್ಬುಲಿಯಂತೆ ಗುಡುಗಿದಳು. ಆ ಕಡೆ ಗಮನವೀಯದೆ ಸಿಜಾರೆ ಹೇಳಿದ: "ಸತ್ಯ ಲುಯಿಗಿನಿ, ಇವಳ ತಾಯಿ, ಅಜ್ಜ, ಮುತ್ತಜ್ಜ–ನಿಗ್ರೋ!"

ಲುಯಿಗಿನಿ ಸಿಟ್ಟನ್ನು ತಡೆಯುವುದಾಗದೆ ಪಿಸ್ತೂಲು ತೆಗೆಯಲು ಜೇಬಿಗೆ ಕೈಯೊಯ್ದ. ಆ ಕೈ ಹೊರಬರುವುದರೊಳಗೆ ಬ್ಲೇಕ್ ಅವನ ಹಿಂಬದಿಗೆ ಜಿಗಿದು ಅವನ ಕೈಯನ್ನು ಗಟ್ಟಿಯಾಗಿ ಹಿಡಿದ. ಲುಯಿಗಿನಿ ತತ್‌ಕ್ಷಣವೇ ಪಿಸ್ತೂಲಿನ ಕುದುರೆಯನ್ನೊತ್ತಿದರೂ ಕೈ ಅದುರಿ ಗುಂಡು ಜಂತಿಗೆ ಬಡಿಯಿತು.

ಲುಯಿಗಿನಿ ಆಕ್ರಾಂತನಾದುದನ್ನು ಕಂಡು ಸಿಯಾರಾ ಭರ್ರನೆ ಬ್ಲೇಕರ ಮೇಲೆರಗಿ, ಕಾಡುಬೆಕ್ಕಿನಂತೆ ಕಚ್ಚತೊಡಗಿದಳು. ಸಿಜಾರೆಯೂ ದೃಢವಾಗಿ ಹೆಜ್ಜೆಯಿಕ್ಕುತ್ತ ಅವರ ಕಡೆ ಮುಂದುವರಿದ. ಬ್ಲೇಕ್ ಸಿಯಾರಾಳನ್ನು ಕಸುವಿನಿಂದ ದೂರ ನೂಕಿ, ಲುಯಿಗಿನಿಯನ್ನು ತಳ್ಳಿಕೊಂಡು ಹೋಗಿ ಹೋಡೆಗೆ ಹತ್ತಿಕ್ಕಿದರು. ಅಷ್ಟರಲ್ಲಿಯೇ ಸಿಯಾರಾ ಸಾವರಿಸಿಕೊಂಡು ಮತ್ತೆ ಬ್ಲೇಕರ ಮೇಲೆ ಏರಿಬಂದಳು; ಅವರ ಮೀಸೆಗಳನ್ನು ಹಿಡಿದು ಜಗ್ಗಿದಳು.

ಕೃತಕ ಮೀಸೆಗಳು, ಅವಳ ಕೈಯಲ್ಲಿ ಕಿತ್ತಿ ಬಂದುಬಿಟ್ಟವು.

ಸಿಜಾರೆ ಕೂಗಿದ:

"ಏನಾಶ್ಚರ್ಯ! ತುಬ್ಬುಗಾರ ಬ್ಲೇಕ್!"

೬

ಸ್ವರೂಪ ಬಯಲಿಗೆ ಬಿದ್ದುದರಿಂದ ಬ್ಲೇಕ್ ಆತ್ಮರಕ್ಷಣೆಗಾಗಿ ಪಿಸ್ತೂಲು ತೆಗೆಯಲನುವಾದರು. ಆದರೆ ಅದು ಜೇಬಿನಲ್ಲಿರಲಿಲ್ಲ. ಅವರಿಗೇನೋ ನೆನಪಾದಂತಾಯಿತು. ನಿಚ್ಚಣಿಕೆ ಏರಿಬರುವಾಗ ಯಾರೋ ಕಳ್ಳ ತಮಗೆ

ಗೊತ್ತಾಗದಂತೆ ಅವನ್ನು ಹಾರಿಸಿದ್ದ. ಇನ್ನು ರಕ್ಷಣೆಯ ಮಾರ್ಗ ಪಲಾಯನ ವೊಂದೇ. ಕೂಡಲೇ ಅವರು ಆ ಕೋಣೆಯಿಂದ ಹೊರಕ್ಕೆ ಹಾರಿದರು.

ದಸ್ಯುದಳಕ್ಕೆಲ್ಲ ಸಾಮಾನ್ಯ ಶತ್ರು ತಮ್ಮ ಗುಪ್ತಸ್ಥಾನದಲ್ಲಿ ಪ್ರವೇಶಿಸಿದ್ದನ್ನು ಕಂಡು ಸಿಜಾರೆ ಲುಯಿಗಿನಿ ಇಬ್ಬರೂ ತಮ್ಮ ಜಗಳವನ್ನು ಬಿಟ್ಟು ಬ್ಲೇಕರನ್ನು ಹಿಡಿಯಲು ಪ್ರವೃತ್ತರಾದರು; ದ್ರುತವೇಗದಿಂದ ಅವರನ್ನು ಬೆನ್ನಟ್ಟಿದರು.

ಬ್ಲೇಕ್ ಹಾಲಿಗೆ ಬಂದಾಗ ಚೋರರೆಲ್ಲ ಪೂರಾ ಎಚ್ಚರುಗೆಟ್ಟು ಅಸಂಬದ್ಧವಾಗಿ ಗೊಂದಲ ಹಾಕುತ್ತಿದ್ದರು, ಎಲ್ಲೆಲ್ಲೂ ಕೂಗಾಟವೇ ಕೂಗಾಟ. ಅವರು ಬಿರುಗಾಳಿಯಂತೆ ಅವರ ನಡುವೆ ನುಗ್ಗಿ, ಅವರನ್ನು ಅತ್ತಿತ್ತ ನೂಕಿ ದಾರಿಮಾಡಿಕೊಂಡು ಮುಂಬರಿದರು. ಕೊನೆಗೆ ದಸ್ಯುಗಳಿಬ್ಬರು ಅವರನ್ನು ಗುರುತಿಸಿ ತಡೆದರು; ಬ್ಲೇಕ್ ಸರಕ್ಕನೆ ಅಲ್ಲಿದ್ದ ಕುರ್ಚಿಯನ್ನೆತ್ತಿ ಅವರ ತಲೆಗೆ ಇಕ್ಕರಿಸಿದರು. ಆಮೇಲೆ ಕೆಲ ಜನ ನರ್ತಕ ನರ್ತಕಿಯರನ್ನು ತಳ್ಳಿ ಬಾಗಿಲೆಡೆಗೆ ಧಾವಿಸಿದರು. ಒಂದಿಬ್ಬರು ಅವರಿಗೆ ಗುಂಡುಹಾಕಲು ಹವಣಿಸಿದರು. ಆದರೆ ಮಧ್ಯದಲ್ಲಿ ಅನೇಕ ಜನರಿದ್ದುದರಿಂದ ಅವರಿಗೆ ತಾಕೀತೆಂಬ ಸಂಶಯದಿಂದ ಸುಮ್ಮನಾದರು.

ಪ್ರಜ್ಞಾಹೀನ ದಸ್ಯುಗಳು ಅಕಾಂಡತಾಂಡವ ಮಾಡಿ ಕೂಗಾಡತೊಡಗಿದರು; ಹೆಂಗುಸರು ಪ್ರಾಣಭಯದಿಂದ ಆರ್ತನಾದ ಮಾಡತೊಡಗಿದರು. ಅವರೆಲ್ಲರ ಧ್ವನಿಯೂ ಅಡಗುವಂತೆ ಸಿಜಾರೆಯ ಸರೋಷ ಗರ್ಜನೆ ಕೇಳಬಂದಿತು: "ಎಲೋ ಮೂರ್ಖರೇ, ತುಬ್ಬುಗಾರ ಓಡಿಹೋಗುತ್ತಾನೆ, ಹಿಡಿಯಿರಿ!"

ಬ್ಲೇಕ್ ಕುರ್ಚಿ ಸ್ಟೂಲುಗಳನ್ನೂ ಸೀಸೆ-ಭಾಂಡಗಳನ್ನೂ ಬ್ಯಾಂಡಿನ ವಾದ್ಯಗಳನ್ನೂ ಕೈಗೆ ಸಿಕ್ಕವನ್ನೆತ್ತಿ ಹಿಡಿಯಬಂದವರನ್ನು ಹೊಡೆಯುತ್ತಾ ಸುಂಟರಗಾಳಿಯಂತೆ ಸುತ್ತಾಡಿ ಬಾಗಿಲ ಹೊರಗೆ ಬಂದು ತಿರುಗಿ ನೋಡಿದರು. ಕೋಣೆಯಲ್ಲೆಲ್ಲ ಗಾಢಾಂಧಕಾರ. ಆದರೆ ಅದರ ಹಿಂದಿನ ಕೋಣೆಯಿಂದ ಅನೇಕ ದಸ್ಯುಗಳು ಹಿಡಿ ಹೊಡೆ ಎನ್ನುತ್ತ ತಮ್ಮನ್ನು ಬೆನ್ನಟ್ಟುವುದು ಕಂಡಿತು. ಬಿಡುಗಡೆಯ ಆಶೆಯಿಂದ ಅವರು ಕತ್ತಲಲ್ಲಿ ಓಡತೊಡಗಿದರು.

ಸಿಜಾರೆ ಒಂದು ಕಂದೀಲು ತರುವಂತೆ ಕೂಗಾಡುತ್ತಿದ್ದುದು ಕೇಳಿಸಿತು.

ಅವನ ಅನುಚರರು ಬ್ಲೇಕರನ್ನು ಕೊಲ್ಲಲು ಕತ್ತಲಲ್ಲಿಯೇ ಗುಂಡುಹಾರಿಸ ತೊಡಗಿದರು. ಒಂದೆರಡು ಗುಂಡುಗಳು ಅವರ ತಲೆಯ ಬಳಿ ಹಾಯ್ದು ಹೋದವು ಆಗವರು ಜೋರಲು ಬಿದ್ದು ಹೊಟ್ಟೆಹೊಸೆಯುತ್ತ ಮುಂದುವರಿ ದರು. ದೂರದಲ್ಲಿ ಒಮ್ಮೆಲೆ ಬೆಳಕು ಕಂಡಿತು. ಬ್ಯಾಟರಿ ಹಿಡಿದು ತನ್ನನ್ನು ಹುಡುಕುತ್ತ ದಸ್ಯುಗಳು ಬರುತ್ತಿದ್ದಾರೆಂದು ಬ್ಲೇಕ್ ತಿಳಿದರು. ಸ್ವಲ್ಪ ಹೊತ್ತಿ ನಲ್ಲಿಯೇ ಸಿಕ್ಕುಬೀಳುವೆನೆಂದು ಬಗೆದು ಅವರು ಒಂದು ದೊಡ್ಡ ಕಂಬದ ಮರೆ ಯಲ್ಲಿ ಅವಿತುಕೊಂಡರು. ಆಗೊಬ್ಬ ದಸ್ಯು ಅವರನ್ನು ನೋಡದೆ, ಕಂಬದ ಬದಿಯಲ್ಲಿ ಹೊರಟಿದ್ದ. ಬ್ಲೇಕ್ ಅವನನ್ನು ಹಿಡಿದು ಬಲವಾಗಿ ಮುಖಕ್ಕೆ ಗುದ್ದಿದರು. ಅವನು ಮೂರ್ಛೆಹೊಂದಿ ಬೀಳಲು ಅವನ ಜೇಬಿನಿಂದ ಪಿಸ್ತೂಲು ಕೆಳಗೆ ಬಿತ್ತು.

ಬ್ಲೇಕ್ ಪಿಸ್ತೂಲನ್ನು ತೆಗೆದುಕೊಂಡು ಹಿಂದೆ ನೋಡಿದರು. ಒಂದು ದೀಪ ಕಾಣಿಸಿತು. ಅವರು ಗುಂಡಿಕ್ಕಿ ಆ ದೀಪವನ್ನಾರಿಸಿದರು. ಅವರನ್ನು ಹಿಡಿಯಲು ಧಾವಿಸುತ್ತಿದ್ದ ಇನ್ನೊಬ್ಬ ದಸ್ಯು ಕಂದೀಲು ಹಿಡಿದು ಮುಂದೆ ಹೊರಟಿದ್ದವನ ಮೇಲೆ ಬಿದ್ದನು. ಅವನು ಬ್ಲೇಕನೆಂದು ಇಬ್ಬರೂ ಗುದ್ದಾಡ ತೊಡಗಿದರು. ಇತರ ದಸ್ಯುಗಳು ಹೊಡೆ ಹೊಡೆ ಎಂದು ಕತ್ತಲಲ್ಲಿ ನಿಂತು ಕೂಗುತ್ತಿದ್ದರು. ಬ್ಲೇಕ್ ಕತ್ತಲಲ್ಲಿ ಓಡತೊಡಗಿದರು.

ಸ್ವಲ್ಪ ದೂರ ಹೋಗುವಷ್ಟರಲ್ಲಿ ಅವರ ಕಾಲು ಜಾರಿತು. ಅಲ್ಲಿಯ ನೆಲ ಅಗಿದುತೆಗೆಯಲಾಗಿತ್ತು. ಜೋಲಿಯನ್ನು ಹಿಡಿಯಲಾಗದೆ ಅವರು ಆ ಕಿಂಡಿಯಲ್ಲಿ ಬಿದ್ದು ಕೆಳಗಿನ ಅಂತಸ್ತಿಗೆ ಬಿದ್ದರು. ಸುದೈವದಿಂದ ಒಂದು ಜಂತಿ ಅವರ ಕಾಲಿಗೆ ಹತ್ತಿದುದರಿಂದ ಅವರು ಅದನ್ನು ಎರಡೂ ಕೈಗಳಿಂದ ಹಿಡಿದು ಜೋತಾಡತೊಡಗಿದರು. ಹಾಗೆಯೇ ನೇತಾಡುತ್ತ ಗೋಡೆಯ ವರೆಗೆ ಮುಂದೆ ಸಾಗಿದರು. ಗೋಡೆಯ ಕೆಲಭಾಗ ಕೆಡವಿದ್ದರು. ಆದ್ದರಿಂದ ಎದುರಿಗೆ ಆಕಾಶವೂ ತೀರ ಕೆಳಗಡೆ ನಗರದ ದೀಪಗಳೂ ಅವರಿಗೆ ಕಾಣಿಸಿ ದವು. ಅವರು ಜಂತಿಯನ್ನು ಬಿಟ್ಟು ಗೋಡೆಯ ಮೇಲೆ ಹೋದರು. ಮತ್ತು ಅಲ್ಲಿ ಸ್ವಲ್ಪ ಹೊತ್ತು ಅಂಗಾತ ಮಲಗಿ ವಿಶ್ರಾಂತಿ ಪಡೆದರು.

ಕೆಲ ನಿಮಿಷ ವಿಶ್ರಾಂತಿ ಪಡೆದು ಎದ್ದು ಬ್ಲೇಕ್ ಜೇಬಿನಿಂದ ಪಿಸ್ತೂಲು ತೆಗೆದರು. ಏಳು ಬಾರಿನ ಪಿಸ್ತೂಲ. ಅದರಲ್ಲಿ ಎಷ್ಟು ಕಾಡತೂಸುಗಳಿವೆ

ಯೆಂಬುದನ್ನು ಎಣಿಸಿ ನೋಡಿ ಮತ್ತೆ ಒಳಗೆ ತುಂಬಿದರು. ಅಷ್ಟರಲ್ಲಿಯೇ ಅವರ ಹಿಂದುಗಡೆ ಕಾಲಸಪ್ಪಳವಾದಂತಾಯಿತು. ಅವರು ಹಿಂತಿರುಗಿ ನೋಡಿದರು. ಸ್ವಲ್ಪ ದೂರದಲ್ಲಿ ಒಂದು ಮನುಷ್ಯಮೂರ್ತಿ ಕಂಡಿತು. ಯಾವನೋ ದಸ್ಯು ಅಲ್ಲಿಯೂ ತಮ್ಮನ್ನು ನಿಃಶಬ್ದವಾಗಿ ಅನುಸರಿಸುತ್ತಿದ್ದಾನೆಂದು ಅವರಿಗೆನಿಸಿತು. ಅವನ ಕಡೆ ಪಿಸ್ತೂಲನ್ನೆತ್ತಿ ದೃಢಸ್ವರದಿಂದ ಅವರೆಂದರು:

"ನನ್ನನ್ನು ಅನುಸರಿಸಿ ಇಲ್ಲಿ ಸಾಯಲಿಕ್ಕೆ ಬಂದೆಯಾ? ಹಾಗಾದ್ದರೆ ಸಾಯಿ!"

ಸ್ವಲ್ಪ ಅಂತರದಲ್ಲಿ ಬಿದ್ದ ಗೋಡೆಯ ಮೇಲೆ ನಿಂತಿದ್ದ ಆ ಮನುಷ್ಯ ಉತ್ತರವಿತ್ತ: "ಸ್ವಲ್ಪ ತಾಳಿ ಒಡೆಯಾ; ಇಷ್ಟು ಅವಸರದಿಂದ ಗುಂಡುಹಾರಿಸುವ ಅಗತ್ಯವಿಲ್ಲ!"

ಆಶ್ಚರ್ಯ! ಅವರ ದಸ್ಯುಮಿತ್ರ ಬಿಲ್ ಮಿಲರನ ಧ್ವನಿ!

"ಓ ಬಿಲ್, ನೀನು ಇಲ್ಲಿ? ಈ ಬಿದ್ದ ಗೋಡೆಯ ಮೇಲೆ ಒಮ್ಮೆಲೆ ಎಲ್ಲಿಂದ ಬಂದೆ ನೀನು?" ಎಂದು ಉತ್ಸಾಹದಿಂದ ಕೇಳಿದರು ಬ್ಲೇಕ್.

"ನನ್ನ ಸಣ್ಣ ಏರೋಪ್ಲೇನಿನಿಂದ!" ಬಿಲ್ ನಗುತ್ತ ನುಡಿದು ಬ್ಲೇಕರ ಕೈಹಿಡಿದು "ಈ ಕಡೆ ಬನ್ನಿ ಒಡೆಯಾ; ಈ ಕಡೆ ನೆಲವಿದೆ." ಎಂದ.

ಇಬ್ಬರೂ ಗೋಡೆಯ ಮೇಲಿಂದ ಹಲಿಗೆ ಮಾತ್ರವಿದ್ದ ಸ್ಥಳಕ್ಕೆ ಬಂದರು. ಅಲ್ಲಿಂದ ಮೇಲೆ ನೋಡಲು ದೊಡ್ಡ ಕಿಡಿಕಿ ಕಾಣಿಸಿತು. ಅದು ಮಾಳಿಗೆಯ ಕಿಂಡಿ; ಅದರಾಚೆ ಆಕಾಶ ಕಂಡಿತು. ಬಿಲ್ಲನ ಸಹಾಯದಿಂದ ಬ್ಲೇಕ್ ಆ ಮಾಳಿಗೆಯ ಮೇಲೆ ಹೋದರು. ಆ ಭವನದ ಬಹಳ ಎತ್ತರದ ಸ್ಥಾನದಲ್ಲಿ ಎತ್ತರವಾದ ಪ್ಲ್ಯಾಟ್‌ಫಾರ್ಮಿನ ಮೇಲೆ ಒಂದು ಕ್ರೇನ್ ಇಟ್ಟಿತ್ತು. ಆ ಕ್ರೇನಿನಿಂದ ಸರಪಳಿಯೊಂದು ಅಂಧಕಾರಮಯ ಅಂಗಳದ ಕಡೆ ಜೋತಾಡುತ್ತಿತ್ತು.

ಆ ಸರಪಳಿಯ ಸಹಾಯದಿಂದ ಓಡಿಹೋಗಬೇಕೆಂದು ಬ್ಲೇಕ್ ಮಿಲರ್ ಇಬ್ಬರೂ ಅತ್ತ ಮುಂದುವರಿದರು. ಅಷ್ಟರಲ್ಲಿಯೇ ಕೆಲ ಜನ ದಸ್ಯುಗಳು ಅವರ ಸುಳಿವನ್ನು ಹಿಡಿದು ಅವರ ಸಮೀಪಕ್ಕೇ ಬಂದರು. ಆದ್ದರಿಂದ ಓಡಿಹೋಗುವ ಸುಯೋಗ ತಪ್ಪಿ ಅವರು ಅಲ್ಲಿಯೇ ಅಂಗಾತ ಮಲಗಿ

ಕೊಂಡರು. ಆದರೂ ನವಾಗತ ದಸ್ಯುಗಳ ದೃಷ್ಟಿಯಿಂದ ಅವರು ತಪ್ಪಿಸಿಕೊಳ್ಳಲಿಲ್ಲ. ಮರುಕ್ಷಣದಲ್ಲಿಯೇ ಮಿಲರನ ಕಿವಿಯ ಬಳಿಯಿಂದ ಗುಂಡೊಂದು ಹಾಯ್ದುಹೋಯಿತು. ಆ ದಸ್ಯುಗಳು ಉಪಯೋಗಿಸುತ್ತಿದ್ದ ಪಿಸ್ತೂಲು ಶಬ್ದರಹಿತವಾದದ್ದು.

ಬಿಲ್ ಬ್ಲೇಕರಿಗೆಂದ: "ಈಗವರು ನಮ್ಮನ್ನು ಇರುಕಿನಲ್ಲಿ ಹಿಡಿದಿದ್ದಾರೆ. ಓಡಿಹೋಗಲು ಒಂದೇ ಒಂದು ಮಾರ್ಗವಿತ್ತು–ಅದೂ ಇಲ್ಲದಾಯಿತು."

ಅರ್ಧಭಗ್ನ ಮಾಳಿಗೆಯನ್ನಾಶ್ರಯಿಸಿ ಬ್ಲೇಕ್ ಕೆಳಗಡೆ ದೃಷ್ಟಿ ಹಾಕಿದರು. ಅಲ್ಲಿಂದ ಬಹಳ ಕೆಳಗೆ ಊರಿನ ಇತರ ಕಟ್ಟಡಗಳ ಚಪ್ಪರಗಳು, ರಾಜಬೀದಿ, ನದಿ, ದೀಪಮಾಲಾ ಭೂಷಿತ ನದೀತೀರ, ಲೋಹಮಾರ್ಗದ ಸೇತು. ಅದೇ ಹೊತ್ತಿಗೆ ಒಂದು ಉಗಿಬಂಡಿ ಕೂಗುತ್ತ ಸೇತುವೆಯ ಮೇಲೆ ಹಾಯ್ದುಹೋಯಿತು. ಬೀದಿಗಳಲ್ಲಿ ಇನ್ನೂ ಲಾರಿ ಬಸ್ಸುಗಳು ಓಡಾಡುತ್ತಿದ್ದವು; ಜನರ ಗದ್ದಲವೂ ಇತ್ತು.

"ಅವರು ಇತ್ತಲೇ ಬರುತ್ತಿದ್ದಾರೆ ಒಡೆಯ, ಸಾವಧಾನ!"

"ಅವರನ್ನು ತಡೆದು ನಿಲ್ಲಿಸು ಬಿಲ್" ಹಿಂದಕ್ಕೆ ಸರಿದು ಬಂದು ಬ್ಲೇಕ್ ಹೇಳಿದರು.

ಅವರು ಹಿಂದೆ ಸರಿಯುವಾಗ ಕಾಲಿಗೇನೋ ತಾಕಿತು. ಮುಟ್ಟಿ ನೋಡಿದರು. ಕಲ್ಲೆಣ್ಣೆಯ ದೊಡ್ಡ ಡ್ರಮ್ಮು. ಆ ಅಂತಸ್ತಿನ ವಿವಿಧ ಭಾಗಗಳಲ್ಲಿಯ ದೀಪಗಳಿಗಾಗಿ ಅಲ್ಲಿ ಆ ಎಣ್ಣೆಯನ್ನಿಟ್ಟಿದ್ದರು. ಬ್ಲೇಕ್ ಕ್ಷಣಹೊತ್ತು ಯೋಚಿಸಿ ಡ್ರಮ್ಮಿನ ಬಾಯಿ ತೆರೆದು ಅದನ್ನು ಒದೆದು ಉರುಳಿಸಿದರು. ಅದರಲ್ಲಿದ್ದ ಎಣ್ಣೆಯೆಲ್ಲ ಅಟ್ಟದ ತುಂಬ ಹರಿದು, ತೊಲೆ ಜಂತಿ ಹಲಗೆಗಳೆಲ್ಲ ತೊಯ್ದವು. ಬ್ಲೇಕ್ ಒಂದು ಕಡ್ಡಿಯನ್ನು ಕೊರೆದು ಒಂದು ತುಂಡು ಕಾಗದನ್ನುರಿಸಿ ಎಣ್ಣೆಯ ಮೇಲೆ ಒಗೆದರು. ಸ್ವಲ್ಪ ಹೊತ್ತಿನಲ್ಲಿ ಉರಿ ಭಕ್ ಭಕ್ ಎಂದು ಚಿಮಣಿಯೆಣ್ಣೆಗೆ ಹತ್ತಿಕೊಂಡು ಕ್ರಮಶಃ ಆದರೆ ಶೀಘ್ರದಲ್ಲಿಯೆ ಅಟ್ಟವನ್ನೆಲ್ಲ ವ್ಯಾಪಿಸಿತು; ಅದರ ಜ್ವಾಲೆಗಳು ಮುಗಿಲಿಗೆ ನೆಗೆಯತೊಡಗಿದವು; ಚತುರ್ದಿಕ್ಕುಗಳಲ್ಲಿಯೂ ಕರ್ಬೊಗೆ ತುಂಬಿಕೊಂಡಿತು.

ಆ ಹೊಗೆಯ ಮರೆಯಲ್ಲಿ ಬ್ಲೇಕ್ ಮಿಲರನ ಕೈಹಿಡಿದೆಳೆದುಕೊಂಡು ಅಟ್ಟದ ತುದಿಗೆ ಬಂದು, ತುದಿಯ ಚಪ್ಪರವನ್ನು ಹಿಡಿದುಕೊಂಡು ಕೆಳಗೆ

ಜೋತು ಬಿದ್ದರು. ಕೆಳಗೆ—ಬಹಳ ಕೆಳಗೆ—ದಾರಿಹೋಕರೂ ಆ ಭಾಗದ ಜನರೂ ನೆರೆದು ಕೋಲಾಹಲವೆಬ್ಬಿಸಿದ್ದರು. ಬೀದಿ ಬೀದಿಗಳಲ್ಲಿ ಪೋಲಿಸರು ಶೀಟಿಗಳ ಕರ್ಕಶ ಧ್ವನಿಯಿಂದ ಅನಾಹೂತವನ್ನು ಸೂಚಿಸುತ್ತಲಿದ್ದರು. ಅಗ್ನಿಕಾಂಡವನ್ನು ಸೂಚಿಸುವ ಉಚ್ಚ ಘಂಟಾನಾದದಿಂದ ವಾಯುಮಂಡಲವು ತರಂಗಿತವಾಯಿತು ತುಸು ಹೊತ್ತಿನಲ್ಲಿಯೆ ಅಗ್ನಿಶಾಮಕದ ನಿರಂತರ ಘಂಟಾಧ್ವನಿಯೂ ದ್ರುತಗಾಮಿ ಇಂಜಿನಿನ ಘಸ್ ಘಸ್ ಶಬ್ದವೂ ಕೇಳಬಂದಿತು. ಒಂದು, ಎರಡು, ಮೂರು—ಹೀಗೆ ಕ್ರಮಶಃ ಅನೇಕ ಅಗ್ನಿಶಾಮಕಗಳು ಘಟನಾಸ್ಥಳಕ್ಕೆ ಬಂದವು.

ಇಬ್ಬರೂ ಕೆಳಗೆ ನೋಡಿದರು: ಸುಮಾರು ನೂರು ಅಡಿ ಕೆಳಗೆ ದೊಡ್ಡ ಮುಂಬಾಗಿಲು ಸಶಬ್ದವಾಗಿ ತೆರೆಯಿತು; ಮೋಟರ್ ಪಂಪಿನ ಯಂತ್ರದ ಗರ್ಜನೆಯೂ ಕೇಳಿಸಿತು; ಇಟ್ಟಿಗೆ ಮಣ್ಣು ರಾಶಿಗಳ ಮಧ್ಯದಲ್ಲಿ ನುಗ್ಗಿ ಅದು ಅಂಗಳದಲ್ಲಿ ಬಂದಿತು. ಅವರ ತಲೆಯ ಮೇಲ್ಗಡೆ ನಿಂತ ಎಣ್ಣೆ ಉರಿದುಹೋಗಿದ್ದುದರಿಂದ ವಹ್ನಿಜ್ವಾಲೆಗಳ ಪ್ರಭೆ ಮಂದವಾಗಿತ್ತು. ಆ ಅಟ್ಟಾಲಿಕೆಯೊಳಗೆ ಅಗ್ನಿಶಾಮಕದ ಕೆಲಸ ಆರಂಭವಾಗಿರುವ ಶಬ್ದವನ್ನೂ ಅವರು ಕೇಳಿದರು. ಬಹು ಕಂಠಗಳ ಚೀತ್ಕಾರ ಆರ್ತನಾದ ಸಕ್ರೋಧ ಗರ್ಜನೆ, ಬಾಟ್ಲಿ ಗ್ಲಾಸುಗಳೊಡೆಯುವ ಶಬ್ದ, ಕುರ್ಚಿ ಮೇಜುಗಳನ್ನಿಡಾಡುವ ಶಬ್ದಗಳೂ ಅವರಿಗೆ ಕರ್ಣಗೋಚರವಾದವು.

ಹೊಟೆಲಿನ ಕೆಳಭಾಗದಲ್ಲಿ ಫಾಯರ್ ಮನ್ನರ ಗುಂಪೊಂದು ನೀರೆರಚುವ ನಳಿಕೆಗಳನ್ನೂ ನಿಚ್ಚಣಿಕೆಗಳನ್ನೂ ತೆಗೆದುಕೊಂಡು ಧಾವಿಸಿ ಬಂದರು. ಕೂಡಲೆ ಬ್ಲೇಕ್ ಕಂಬಿಯ ಮೇಲೆ ಜಿಗಿದು, ಜೇಬಿನಿಂದ ಒಂದು ಕಾಗದ ತೆಗೆದು ಏನೋ ಬರೆದು ಮಡಿಚಿ ಕೆಳಗೆ ಒಗೆದರು. ಮಿಲರನೂ ನೆಗೆದುಹೋಗಿ ಅವರ ಹತ್ತಿರ ನಿಂತನು. ಕೆಳಗಿದ್ದವರಲ್ಲೊಬ್ಬನ ಕಣ್ಣಿಗೆ ಬ್ಲೇಕರ ಕಾಗದ ಗೋಚರಿಸಿ, ಅದನ್ನೆತ್ತಿಕೊಂಡು ಅವನು ಓದಿಕೊಂಡದ್ದು ಕಾಣಿಸಿತು.

ಬಳಿಕ ಅವರು ಗೋಡೆಯನ್ನಡರಿ ಅಮೃತಶಿಲಾ ನೆಲಗಟ್ಟಿನ ಹಾಲಿಗೆ ಹೋದರು. ಅಲ್ಲಿ ರಂಧೆಯೋ ರಂಧೆ ಹಾಲಿನ ಮಧ್ಯದಲ್ಲಿ ಹತ್ತು ಹನ್ನೆರಡು ಜನ ದಸ್ಯುಗಳು ಅಮಲೇರಿ ಎದ್ದುನಿಲ್ಲುವ ತ್ರಾಣವಿಲ್ಲದೆ ಉರುಳಾಡುತ್ತ ಅಸಂಬದ್ಧ ಪ್ರಲಾಪ ನಡೆಸಿದ್ದರು; ಶೂನ್ಯ ದೃಷ್ಟಿಯಿಂದ ಸುತ್ತಲೂ ನೋಡು

ತ್ತಿದ್ದರು. ನೋಡುನೋಡುವಷ್ಟರಲ್ಲಿ ಗೋಡೆಗೆ ಅನೇಕ ನಿಚ್ಚಣಿಕೆಗಳನ್ನಿಟ್ಟು ಫಾಯರ್‌ಮನ್ನರು ಏರಿಬಂದರು. ಅವರನ್ನು ಕಂಡಕೂಡಲೇ ದಸ್ಯುಗಳು ಪ್ರಜ್ಞಾಹೀನರಾಗಿದ್ದರೂ ಗ್ಲಾಸು, ಬಾಟ್ಲಿ, ಗುಂಡುಗಳಿಂದ ಆತ್ಮರಕ್ಷಣೆಮಾಡಿ ಕೊಳ್ಳಲು ಉದ್ಯುಕ್ತರಾದರು. ಅದೇ ಗೊಂದಲದಲ್ಲಿ ಪೋಲಿಸರ ತೂರ್ಯ ನಾದವೂ ಆರಂಭವಾಯಿತು.

ಫಾಯರ್‌ಮನ್ನರು ಕಳ್ಳರ ದಾಳಿಯನ್ನೆದುರಿಸುವುದಕ್ಕಾಗಿ ತಮ್ಮ ಸಹ ಕಾರಿಗಳ ನೆರವನ್ನು ಕೋರಿದರು. ಕೂಡಲೇ ಯಂತ್ರಗಳ ಮೂಲಕ ಅಜಸ್ರ ಧಾರೆಯಾಗಿ ನೀರು ಸುರಿಯಲಾರಂಭವಾಯಿತು. ಕಳ್ಳರು ಕಕ್ಕಾವಿಕ್ಕಿ ಯಾದರು. ಅವರು ಹೋರಾಟದಿಂದ ನಿವೃತ್ತರಾಗಿ ಕೆಳಗಿಳಿದು ಓಡಿಹೋಗಲು ಹವಣಿಸಿದರು. ಆಗ ಅವರ ಮೇಲೆ ಫಾಯರ್‌ಮನ್ನರ ಪ್ರತಿದಾಳಿ ಆರಂಭ ವಾಯಿತು. ಮತ್ತೆ ಅನೇಕ ಫಾಯರ್‌ಮನ್ನರು ಮೇಲೇರಿ ಬಂದರು. ಕೊನೆಗೆ ಬಿಲ್ ಮಿಲರನ ಬುಲ್‌ಡಾಗ್ ಕೂಟದ ದಸ್ಯುಗಳು ರಣಕ್ಷೇತ್ರದಲ್ಲಿ ನುಗ್ಗಿ ದರು. ಬ್ಲೇಕ್-ಬಿಲ್ ಇಬ್ಬರೂ ಹಿಂದೆ ನಿಂತು ಅವರನ್ನು ಪ್ರೋತ್ಸಾಹಿಸ ತೊಡಗಿದರು. ಫಾಯರ್‌ಮನ್ನರೂ ಬುಲ್‌ಡಾಗ್ಗುಗಳೂ ಹಾಲಿನಲ್ಲಿ ಹೊಕ್ಕು ದಸ್ಯುಗಳನ್ನು ಅಟ್ಟಿಕೊಂಡು ನಡೆದರು

ವಿಶಾಲದೇಹಿ ಸಿಜಾರೆ ಆ ಕೋಣೆಯ ಒಂದು ಬದಿಯಲ್ಲಿ ನಿಂತಿರುವುದು ಬ್ಲೇಕರಿಗೆ ಕಂಡಿತು; ಕ್ರೋಧಸಂತಾಪಗಳಿಂದ ಅವನು ಹುಚ್ಚನಂತಾಗಿದ್ದ. ಆಗ ಧೂಸರ ವಸ್ತ್ರಧಾರಿ ಪೋಲಿಸ್ ಅಧಿಕಾರಿಯೊಬ್ಬನು ಬಂದು ಅವನ ಎದೆಗೆ ಪಿಸ್ತೂಲಿನ ನಳಿಕೆಯನ್ನು ಒತ್ತಿಹಿಡಿದನು. ತಾನು ಬರೆದೊಗೆದ ತುಂಡು ಹಾಳೆ ವಿಫಲವಾಗಲಿಲ್ಲವೆಂದು ಬ್ಲೇಕ್ ಎಂದುಕೊಂಡರು.

"ಎರಡೂ ಕೈಗಳನ್ನು ಮೇಲೆತ್ತು ಬೇಗ, ಜೇನಾ. ನಿನ್ನ ಕಪಟವೆಲ್ಲ ಬಯಲಾಯಿತು. ನಾನು ಸರಕಾರೀ ತುಬ್ಬುಗಾರ." ಪೋಲಿಸ್ ಅಧಿಕಾರಿ ಯೆಂದ.

ನಿರುಪಾಯನಾದ ಸಿಜಾರೆ ಕೈಮೇಲೆತ್ತಿದ. ಆಕ್ಷಣವೇ ಇನ್ನೊಬ್ಬ ಪೋಲಿಸ್ ಬಂದು ಅವನ ಕೈಗಳಿಗೆ ಸಂಕೋಲೆ ತೊಡಿಸಿದ. ಬಂಧಿತರಾದ ದಸ್ಯುಗಳನ್ನು ಒಬ್ಬೊಬ್ಬರನ್ನೇ ಕೆಳಗಿಳಿಸಿ ಒಯ್ಯಲಾಯಿತು. ಬ್ಲೇಕ್ ಬದಿ ಯಲ್ಲಿ ನಿಂತು ಅವರನ್ನು ಸಾಗಹಾಕುತ್ತಿದ್ದ.

"ಒಂದೇ ರಾತ್ರಿಯ ಪರಿಶ್ರಮ ಬಹಳ ಫಲ ಕೊಟ್ಟಿತು," ಬ್ಲೇಕ್ ಸಮಾಧಾನದಿಂದ ನುಡಿದರು. ಸಿಜಾರೆ ಬಂಧಿತನಾದುದನ್ನು ಅವರಾಗಲೇ ನೋಡಿದ್ದರು; ಆ ಬಗ್ಗೆ ಚಿಂತೆಯಿರಲಿಲ್ಲ. ಆದರೆ ಥಕ್ಕನೆ ಏನೋ ನೆನಪಾಗಿ ಅವರು ವಿಚಲಿತರಾದರು.

"ಆದರೆ ಲುಯಿಗಿನಿ? ಈ ತಂಡದಲ್ಲಿ ಅವನು ಕಾಣುವುದಿಲ್ಲ. ಸಿಜಾರೆಯ ಕೈಯೊಳಗಿನ ಚೂರಿ ಅವನು!"

"ಹೌದು, ಅವನ ವಿಷಯ ಮರೆತುಹೋಗಿತ್ತು. ಹಾಂ, ಅವನನ್ನು ಹುಡುಕುತ್ತೇನೆ" ಬಿಲ್ ಉತ್ತರವಿತ್ತ.

ಬಿಲ್ ಗೋಡೆಯ ಆ ಬದಿಗೆ ಹೋಗಿ ಶೋಧಿಸಲಾರಂಭಿಸಿದ. ಅಲ್ಲೊಂದು ನಿಚ್ಚಣಿಕೆಯಿಂದ ಒಬ್ಬ ಯುವಕ ಒಬ್ಬ ಯುವತಿಯೊಂದಿಗೆ ಜಾಗರೂಕತೆಯಿಂದ ಇಳಿಯುತ್ತಲಿದ್ದ.

"ಒಡೆಯರೇ ಬನ್ನಿ, ಇಲ್ಲಿದೆ ಜೋಡಿ!" ಬಿಲ್ ಕೂಗಿದ.

ಲುಯಿಗಿನಿ ಒಂದು ಎತ್ತರವಾದ ಮಂಚದ ಮರೆಗೆ ಸರಿದು ಪಿಸ್ತೂಲನ್ನು ಹೊರದೆಗೆದ. ಪರಕ್ಷಣದಲ್ಲಿ ಒಂದು ಗುಂಡು ಬಿಲನ ಟೊಪ್ಪಿಗೆಗೆ ತಾಗಿಕೊಂಡು ಹೋಯಿತು. ಅಷ್ಟರಲ್ಲಿ ಬ್ಲೇಕರೂ ಅಲ್ಲಿಗೆ ಹೋಗಲು ಲುಯಿಗಿನಿ ಅವರಿಗೊಂದು ಗುಂಡು ಹಾರಿಸಿದ. ಆದರೆ ಖಟ್ಟೆಂದು ಕುದುರೆಯ ಖುರಪುಟ ಧ್ವನಿ ಮಾತ್ರ ಆಯಿತು; ಅದರೊಳಗಿನ ಕಾಡತೂಸುಗಳು ತೀರಿದ್ದವು. ಅವನು ವಿರಕ್ತಿಯಿಂದ ಪಿಸ್ತೂಲನ್ನೆಸೆದು ನಿಚ್ಚಣಿಕೆಯಿಳಿದು ಓಡಲಾರಂಭಿಸಿದ.

ಸಿಯಾರಾಳನ್ನು ಹಾಗೇ ಬಿಟ್ಟು ಬ್ಲೇಕ್ ಲುಯಿಗಿನಿಯನ್ನು ಬೆನ್ನಟ್ಟಿದರು. ಅವನು ಹೆಚ್ಚು ದೂರ ಓಡಲಾಗದೆ ಚೂರಿಹಸ್ತನಾಗಿ ಬ್ಲೇಕರನ್ನು ಕಾಯ್ದುಕೊಂಡು ನಿಂತ. ಅವರು ಸಮೀಪಕ್ಕೆ ಬರುತ್ತಲೇ ಅವರ ಕೊರಳಿಗೆ ಗುರಿಯಿಟ್ಟು ಚೂರಿಯನ್ನೆಸೆದ. ಬ್ಲೇಕ್ ತತ್ಕ್ಷಣ ಮುಖ ಪಕ್ಕಕ್ಕೆ ಮಾಡಿ ಗುರಿತಪ್ಪಿಸಿಕೊಂಡರು; ಚೂರಿ ಕೆಳಗೆ ಬಿದ್ದುಬಿಟ್ಟಿತು. ಅದನ್ನು ಕಂಡು ಲುಯಿಗಿನಿ ಗೋಡೆಯ ಅಡಿಯಲ್ಲಿ ಹರಿಯುತ್ತಿದ್ದ ನದೀಗರ್ಭದಲ್ಲಿ ಹಾರಿದನು. ಅವನ ಈ ದುಃಸಾಹಸವನ್ನು ಕಂಡು ಬ್ಲೇಕ್ ಬೆರಗುಬೆಪ್ಪಾದರು.

ಬ್ಲೇಕ್ ಕೆಳಗಿಳಿದು ಬಂದಾಗ ಬಿಲ್ ಮೊದಲಾದವರಿಂದ ಮುತ್ತಲ್ಪಟ್ಟ

ಸಿಯೂರಾ ಅವರೊಡನೆ ನಖದಂತಗಳಿಂದ ಹೋರಾಡುತ್ತಿದ್ದಳು ಬ್ಲೇಕರನ್ನು ನೋಡಿ ಅವಳು ಕೂಗಿಕೊಂಡಳು: "ಈ ರಕ್ಕಸರು ನನ್ನನ್ನೇಕೆ ಆಕ್ರಮಿಸಿದ್ದಾರೆ? ನಾನು ಯಾವ ಅಪರಾಧವನ್ನೂ ಮಾಡಿಲ್ಲ. ನನ್ನನ್ನು ಬಂಧಿಸಲು ನಿಮ ಗೇನೂ ಅಧಿಕಾರವಿಲ್ಲ, ಮಿ. ಬ್ಲೇಕ್!"

ಬ್ಲೇಕ್ ಹೇಳಿದರು: "ಬಿಲ್, ಅವಳನ್ನು ಬಿಡಬೇಡ ಇವಳನ್ನು ಲಾಕ ಪ್ಪಿನಲ್ಲಿಡಲೇಬೇಕು. ಉಳಿದೆಲ್ಲರೊಡನೆ ಇವಳ ವಿಚಾರಣೆಯೂ ಆಗುವುದು. ಈಕೆ ಕಳ್ಳರ ಕೂಟದಲ್ಲಿದ್ದಳು, ಸಿಜಾರೆಗೆ ನಾನಾ ಬಗೆಯಿಂದ ಸಹಾಯ ಮಾಡಿದ್ದಾಳೆ ಎಂಬುದನ್ನು ಸಿದ್ಧಪಡಿಸುವುದು ಕಠಿನವಲ್ಲ."

## ೧೦

ಸಿಜಾರೆಯನ್ನು ಬಂಧಿಸಿದ ಗುಪ್ತಪೋಲಿಸ ಅಧಿಕಾರಿಯೂ ಅವನ ಸಹ ಕಾರಿಯೂ ಹಿಂದುಮುಂದಿದ್ದು ಅವನನ್ನು ಕೆಳಗಿಳಿಸಿಕೊಂಡು ನಡೆದರು. ಆದರೆ ಸಿಜಾರೆ ಸಹಜವಾಗಿ ಕೆಳಗಿಳಿದು ಬರಲಿಲ್ಲ. ಪಟ್ಟು ಹಿಡಿದು ಅವರನ್ನು ಬಾಯಿಗೆ ಬಂದಂತೆ ಬಯ್ಯತೊಡಗಿದ. ಆಗ ಧೂಸರ ವಸ್ತ್ರಧಾರಿ ತುಬ್ಬು ಗಾರನು ಅವನ ಕಿವಿಯಲ್ಲಿ ಏನೇನೋ ಪಿಸುಗುಟ್ಟಿದ. ಅವನ ಮಾತುಗಳನ್ನು ಕೇಳಿ ಸಿಜಾರೆ ತಣ್ಣಗಾಗಿಬಿಟ್ಟ; ಸುಮ್ಮನೆ ಕೆಳಗಿಳಿದು ಬಂದ.

ಹೊರಬಾಗಿಲ ಹೊರಗೆ ಒಂದು ಕಾರು ನಿಂತಿತ್ತು. ತುಬ್ಬುಗಾರರಿಬ್ಬರೂ ಸಿಜಾರೆಯನ್ನು ಅದರ ಹತ್ತಿರ ಹಿಡಿದೊಯ್ದರು.

"ಎಲ್ಲ ವಿಘ್ನಗಳು ದೂರಾಗಿವೆ ಇನ್ಸ್‌ಪೆಕ್ಟರ್! ಇದೇ ಮುಖ್ಯ ನಾಣ್ಯ ಇದರ ಭಾರವನ್ನು ನೀವು ಎಚ್ಚರಿಕೆಯಿಂದ ವಹಿಸಿಕೊಳ್ಳಿರಿ." ತುಬ್ಬುಗಾರ ಅಧಿಕಾರಿ ಕಾರಿನಲ್ಲಿದ್ದ ಪೋಲಿಸ್ ಅಧಿಕಾರಿಗೆ ಹೇಳಿ, ಸಿಜಾರೆಯನ್ನು ಕಾರಿ ನಲ್ಲಿ ಹೊಗಿಸಿ, ತಾನೂ ಹತ್ತಿ ಅವನ ಪಕ್ಕದಲ್ಲಿ ಕುಳಿತುಕೊಂಡ. ಗಾಡಿ ಹೊರಟಿತು.

ಹತ್ತು ಹದಿನೈದು ನಿಮಿಷಗಳಲ್ಲಿ ಕಾರು ನಿರ್ಜನವಾದ ಬೀದಿಗೆ ಬಂದು ನಿಂತಿತು. ಗುಪ್ತಪೋಲಿಸ್ ಅಧಿಕಾರಿ ಸಿಜಾರೆಯನ್ನು ಕೆಳಗಿಳಿಸಿ, ಅವನ ಮೇಯ ಮೇಲಿನ ಜೇಬಿನಲ್ಲಿ ಕೈಹಾಕಿದ. ಅಂದು ರಾತ್ರಿಯಲ್ಲಿ ಅವನ ಸಂಪಾ

ದಿಸಿದ ಹಣವೆಲ್ಲ ಅದರಲ್ಲಿತ್ತು. ಅದನ್ನೆಲ್ಲ ಕಿತ್ತುಕೊಂಡು ಆ ತುಬ್ಬುಗಾರ ಹೇಳಿದ: "ನಿನ್ನಿಂದಿನ ಉಪಾರ್ಜನೆ ನಿನ್ನ ಬಿಡುಗಡೆಗಾಗಿ ಕಪ್ಪ; ಇದೇ ನಿನಗೆ ಶಿಕ್ಷೆ. ಇನ್ನು ಬೇಕಾದಲ್ಲಿಗೆ ಹೋಗಬಹುದು, ಸಿಜಾರಿ."

ಹಣವನ್ನೆಲ್ಲ ತನ್ನ ಜೇಬಿನಲ್ಲಿಟ್ಟುಕೊಂಡು ಆ ಛದ್ಮವೇಷದ ತುಬ್ಬುಗಾರನು ಗಹಗಹಿಸಿ ನಗುತ್ತ ಸ್ವಾಭಾವಿಕ ಸ್ವರದಲ್ಲಿ ಸಿಜಾರಿಗೆಂದ: "ಇಲ್ಲಿನ್ನು ನಿಂತು ಪ್ರಯೋಜನವೇನು? ಯಃಪಲಾಯನ ಮಾಡು."

ಈ ಸ್ವಾಭಾವಿಕ ಸ್ವರವನ್ನು ಸಿಜಾರಿ ಗುರುತಿಸಿದ. ಇಲಿನ್ ಹೆಲ್ಲಳ ಗಂಡ ಜಿಲ್ಬರ್ಟ್ ಹೆಲ್; ಚತುರ ಚೋರ! ಅವನ ಸಹಕಾರಿಗಳೂ ಅವನ ದಲದವರೇ ಎಂಬುದನ್ನು ಹೇಳಲಿಕ್ಕೆ ಬೇಡ.

ಜಿಲ್ಬರ್ಟನ ಪ್ರತಾರಣೆಯನ್ನರಿತು ಸಿಜಾರಿ ಗಾಯಗೊಂಡ ಸಿಂಹನಂತೆ ಗರ್ಜಿಸಿದ. ಕೈಬೇಡಿಗಳನ್ನು ಕಿತ್ತೊಗೆಯಲು ಪ್ರಚಂಡವೇಗದಿಂದ ಆಕರ್ಷಿಸಿದ. "ಏ ಮೂರ್ಖಾ, ಒಂದು ದಿನ ಇದರ ಫಲಭೋಗವನ್ನು ಉಣ್ಣಬೇಕಾಗುವುದು. ಇನ್ನೂ ನನ್ನ ಕೈ ನಿನಗೆ ಗೊತ್ತಾಗಿಲ್ಲ!"

ಸಿಜಾರಿ ಅಲ್ಲಿಂದ ಓಡಿಹೋಗಿ ಒಂದು ಸಣ್ಣ ಸಂದಿಯಲ್ಲಿ ಹೊಕ್ಕ. ಅದು ಅವನಿಗೆ ಪರಿಚಿತ. ಅಲ್ಲಿ ಅವನಿಗೆ ಗುಪ್ತ ಆಶ್ರಯ ಸಿಕ್ಕುವುದೆಂಬ ಭರವಸೆಯಿತ್ತು.

ಅದೇ ಕಾರಿನಲ್ಲಿ ಇಲಿನ್ ಈ ವರೆಗೆ ಸ್ತಬ್ಧವಾಗಿ ಕುಳಿತಿದ್ದಳು. ಈಗ ಮಾತನಾಡಿದಳು: "ಸರಿಯಾದ ಶಾಸ್ತಿಯಾಯಿತು. ಈ ರಾಕ್ಷಸ ನನ್ನನ್ನು ಕಡಿಮೆ ಪೀಡಿಸಿದನೇ. ಚಿರೂಟಿನಿಂದ ಕಣ್ಣುಗಳನ್ನು ಸುಡಬೇಕೆಂದು ಮಾಡಿದ್ದ. ಜೀವದಿಂದ ಉಳಿದುಕೊಂಡನೇನೋ ನಿಜ. ಬ್ಲೇಕ್ ಇವನ ಜೊತೆಗಾರರನ್ನು ಬಂಧಿಸುತ್ತಾರೆ. ಈ ಸರ್ದಾರನ ದಸ್ಯು ಸಮ್ರಾಜನಾಗಬೇಕೆಂಬ ಹವ್ಯಾಸ ಶೇಖಮುಹಮ್ಮದೀಯ ಸ್ವಪ್ನದಂತೆ ಚೂರುಚೂರಾಯಿತು!"

# — ತಪ್ಪದೆ ಓದಬೇಕಾದ ಪುಸ್ತಕಗಳು —

ಪ್ರತಿಯೊಂದರ ಬೆಲೆ ಅಂಚೆ ವೆಚ್ಚ ಸೇರಿ ಕೊಡಲಾಗಿದೆ.

## ಉತ್ತಮ ಕಾದಂಬರಿಗಳು.

| | | |
|---|---|---|
| ಬಣ್ಣದ ಬದುಕು | ಅ. ನ. ಕೃಷ್ಣರಾಯ | ೩–೪–೦ |
| ಬೀದಿಯಲ್ಲಿ ಬಿದ್ದವಳು | ಬಸವರಾಜ ಕಟ್ಟೀಮನಿ | ೨–೧೨–೦ |
| ಶಕುಂತಲಾ | ಪ್ರೊ ಫಡಕೆ | ೩–೦–೦ |
| ಸಾವಿನ ಉಡಿಯಲ್ಲಿ | ಎನ್. ಕೆ. | ೩–೪–೦ |
| ದೇವರೆಲ್ಲಿ | ರಮಾಕಾಂತ | ೪–೪–೦ |
| ಷೋಡಶಿ | ಶರಶ್ಚಂದ್ರ | ೨–೧೨–೦ |
| ಗಂಡುಹೆಣ್ಣಿನ ಸಮಸ್ಯೆ | ಕುಪ್ಪಮ್ಮ | ೩–೪–೦ |
| ಪರಾವಲಂಬಿ | ಜನಾರ್ದನ ಗುರ್ಕಾರ್ | ೨–೧೨–೦ |
| ಹಳ್ಳದಿಂದ ಹಾದಿಗೆ | ,, | ೧–೧೨–೦ |
| ಬದುಕಿನ ಸುಳಿಯಲ್ಲಿ | ಸೇವ ನಮಿರಾಜಮಲ್ಲ | ೨–೪–೦ |
| ಮಾಲತೀಮಂದಿರ | ತೇಜರಾನಿ | ೨–೪–೦ |

## ಕಾಮಶಾಸ್ತ್ರದ ಗ್ರಂಥಗಳು.

| | | |
|---|---|---|
| ರತಿ ರಹಸ್ಯ | ........ | ೧–೧೪–೦ |
| ವಿಕೃತಕಾಮ | ........ | ೧–೧೪–೦ |
| ಪ್ರೇಮಕಲಾ | ........ | ೧–೧೪–೦ |
| ಅನಂಗರಂಗ | ........ | ೧–೧೪–೦ |
| ಕಾಮಕುಂಜ | ........ | ೧–೧೪–೦ |
| ಕಾಮಃಶಾಸ್ತ್ರ | ........ | ೧–೧೪–೦ |
| ಕೈಗನ್ನಡಿ (ಸಚಿತ್ರ ಹಸ್ತಸಾಮುದ್ರಿಕ) | | ೧–೧೪–೦ |
| ಬ್ರಹ್ಮಚರ್ಯವೇ ಜೀವನ ಅರ್ಥಾತ್ ವೀರ್ಯನಾಶವೇ ಮೃತ್ಯು | | ೩–೬–೦ |
| ಉದರದ ಆರೋಗ್ಯ ಮತ್ತು ಸ್ನಾಯುಬಲ ಸಂವರ್ಧನ (೧೫೦ ಚಿತ್ರ) | | ೨–೬–೦ |

ಇಂದೇ ಮನಿಯಾರ್ಡರು ಕಳಿಸಿ ಪುಸ್ತಕ ತರಿಸಿಕೊಳ್ಳಿರಿ.

**ಸಮಾಜ ಪುಸ್ತಕಾಲಯ, ಭಗತಸಿಂಗಬೀದಿ, ಧಾರವಾಡ.**